

# ಡಾ. ಹೆಬ್ಬಾಳೆ. ಕೆ. ನಾಗೇಶರವರ ಬದುಕು ಬರಹ

(ಕ.ರಾ.ಶಿ. ಸಂಸ್ಥೆಯ ಸ್ನಾತಕೋತ್ತರ ಕನ್ನಡ ಸಂಶೋಧನ ಕೇಂದ್ರ, ಬೀದರ ಇವರಿಗೆ
ಎಂ.ಫಿಲ್. ಅಂಶಿಕ ಪದವಿಗಾಗಿ ಸಲ್ಲಿಸುತ್ತಿರುವ ನಿಬಂಧ)

ಸಂಶೋಧಕರು

ನೀಲಮ್ಮಾ ಶರಣಪ್ಪಾ

ಸಂಶೋಧನ ಮಾರ್ಗದರ್ಶಕರು

ಡಾ. ಜಗನ್ನಾಥ ಹೆಬ್ಬಾಳೆ

ನಿರ್ದೇಶಕರು

ಕ.ರಾ.ಶಿ. ಸಂಸ್ಥೆಯ

ಸ್ನಾತಕೋತ್ತರ ಕನ್ನಡ ಸಂಶೋಧನ ಕೇಂದ್ರ, ಬೀದರ.



ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ - 583276.

ಸೆಪ್ಟಂಬರ್-2009

682





# ಡಾ. ಹೆಬ್ಬಾಲೆ. ಕೆ. ನಾಗೇಶರವರ ಬದುಕು ಬರಹ

(ಕ.ರಾ.ಶಿ. ಸಂಸ್ಥೆಯ ಸ್ನಾತಕೋತ್ತರ ಕನ್ನಡ ಸಂಶೋಧನ ಕೇಂದ್ರ, ಬೀದರ ಇವರಿಗೆ ಎಂ.ಫಿಲ್. ಅಂಶಿಕ ಪದವಿಗಾಗಿ ಸಲ್ಲಿಸುತ್ತಿರುವ ನಿಬಂಧ)



ಸಂಶೋಧಕರು

**ನೀಲಮ್ಮಾ ಶರಣಪ್ಪಾ**

ಸಂಶೋಧನ ಮಾರ್ಗದರ್ಶಕರು

**ಡಾ. ಜಗನ್ನಾಥ ಹೆಬ್ಬಾಳೆ**

ನಿರ್ದೇಶಕರು

ಕ.ರಾ.ಶಿ. ಸಂಸ್ಥೆಯ

ಸ್ನಾತಕೋತ್ತರ ಕನ್ನಡ ಸಂಶೋಧನ ಕೇಂದ್ರ, ಬೀದರ.



**ಕನ್ನಡ ವಿಶ್ವವಿದ್ಯಾಲಯ. ಹಂಪಿ. ವಿದ್ಯಾರಣ್ಯ - 583276.**

**ಸೆಪ್ಟಂಬರ್-2009**

# ಪ್ರಮಾಣ ಪತ್ರ

**"ಡಾ. ಹೆಬ್ಬಾಲೆ. ಕೆ. ನಾಗೇಶರವರ ಬದುಕು ಬರಹ"** ಎಂಬ ನಿಬಂಧವನ್ನು ಡಾ. ಜಗನ್ನಾಥ ಹೆಬ್ಬಾಳೆ ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿ, ಎಂ.ಫಿಲ್. ಪದವಿಗಾಗಿ ಕ.ರಾ.ಶಿ. ಸಂಸ್ಥೆಯ ಸ್ನಾತಕೋತ್ತರ ಕನ್ನಡ ಸಂಶೋಧನ ಕೇಂದ್ರ, ಬೀದರ ಇವರಿಗೆ ಸಲ್ಲಿಸುತ್ತಿದ್ದೇನೆ. ಪ್ರಸ್ತುತ ನಿಬಂಧವು ಮೂಲವಾಗಿದ್ದು, ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

ಸ್ಥಳ: ಬೀದರ
ದಿನಾಂಕ: ೩೦-೦೯-೨೦೦೯

Oneelam

ನೀಲಮ್ಮಾ ಶರಣಪ್ಪಾ
ಎಂ.ಫಿಲ್. ವಿದ್ಯಾರ್ಥಿನಿ
ಕ.ರಾ.ಶಿ. ಸಂಸ್ಥೆಯ
ಸ್ನಾತಕೋತ್ತರ ಕನ್ನಡ
ಸಂಶೋಧನ ಕೇಂದ್ರ, ಬೀದರ.

# ಮಾರ್ಗದರ್ಶಕರ ಪ್ರಮಾಣ ಪತ್ರ

ನೀಲಮ್ಮಾ ಶರಣಪ್ಪಾ ಅವರು ಸಾದರಪಡಿಸಿದ **" ಡಾ. ಹೆಬ್ಬಾಲೆ. ಕೆ. ನಾಗೇಶರವರ ಬದುಕು ಬರಹ "** ಎಂಬ ಸಂಪ್ರಬಂಧವು ಮೂಲ ಸಂಶೋಧನ ಕೃತಿಯಾಗಿದೆ. ಇವರು ನನ್ನ ಮಾರ್ಗದರ್ಶನದಲ್ಲಿ ಕರ್ನಾಟಕ ರಾಷ್ಟ್ರೀಯ ಶಿಕ್ಷಣ ಸಂಸ್ಥೆಯ ಸ್ನಾತಕೋತ್ತರ ಕನ್ನಡ ಸಂಶೋಧನ ಕೇಂದ್ರದಲ್ಲಿ ಈ ಸಂಶೋಧನೆಯನ್ನು ಕೈಕೊಂಡಿದ್ದಾರೆ.

ಪ್ರಸ್ತುತ ಸಂಶೋಧನ ಸಂಪ್ರಬಂಧನ ವಿಷಯ ಕುರಿತು ಯಾವುದೇ ವಿಶ್ವವಿದ್ಯಾಲಯದಲ್ಲಿ ಅಧ್ಯಯನ ನಡೆದಿರುವುದಿಲ್ಲ. ಅಲ್ಲದೇ ಈ ಮೊದಲು ಸಂಪ್ರಬಂಧದ ಯಾವುದೇ ಭಾಗ ಇಡಿಯಾಗಿ ಇಲ್ಲವೆ ಬಿಡಿಯಾಗಿ ಎಲ್ಲಿಯೂ ಪ್ರಕಟವಾಗಿಲ್ಲ. ಈ ಸಂಪ್ರಬಂಧ ಎಂ.ಫಿಲ್. ಪದವಿಗೆ ಅರ್ಹವಾಗಿದೆಯೆಂದು ಹೇಳುತ್ತ, ಈ ಪ್ರಮಾಣ ಪತ್ರ ನೀಡುತ್ತೇನೆ.

ಸ್ಥಳ: ಬೀದರ.
ದಿನಾಂಕ: ೩೦-೦೯-೨೦೦೯

ಡಾ. ಜಗನ್ನಾಥ ಹೆಬ್ಬಾಳೆ
ಸಂಶೋಧನ ಮಾರ್ಗದರ್ಶಕರು
ಕ.ರಾ.ಶಿ. ಸಂಸ್ಥೆಯ ಸ್ನಾತಕೋತ್ತರ
ಕನ್ನಡ ಸಂಶೋಧನ ಕೇಂದ್ರ, ಬೀದರ.



ಡಾ. ಹೆಬ್ಬಾಲೆ.ಕೆ. ನಾಗೇಶ

# ಅಧ್ಯಾಯನದ ಉದ್ದೇಶ ಮತ್ತು ಸ್ವರೂಪ

ಜನಪದ ನಮ್ಮ ಮೂಲ ಬೇರು, ಇವತ್ತು ನಾಗರಿಕ ಸಮಾಜದವರೆಂದು ನಾವು ಎಷ್ಟು ಬೀಗುತ್ತಿದ್ದರು. ಹಳೆ ಬೇರಿಗೆ ಚಿಗುರಿದ ಹೊಸ ರೆಂಬೆ – ಕೊಂಬೆಗಳೆನ್ನುವುದನ್ನು ಮರೆಯುವಂತಿಲ್ಲ, ಸಂಸ್ಕೃತಿಯನ್ನುವುದು ನಿಂತ ನೀರಲ್ಲ, ಅದು ಸದಾ ಸುಂದರವಾಗಿ, ಸ್ವಚ್ಛಂದವಾಗಿ ಹರಿಯುವ ಝುರಿಯಂತೆ, ಎತ್ತರ, ತಗ್ಗು, ವಿಶಾಲ, ನಿಡಿದಾದ ಭೂಮಿಗೆ ತಕ್ಕಂತೆ ಆಕಾರ ಪಡೆದು ಹೇಗೆ ಹರಿಯುತ್ತದೋ ಹಾಗೆಯೇ ಸಂಸ್ಕೃತಿಯು ಜನವರ್ಗ, ಪ್ರದೇಶ, ಕಾಲಕ್ಕೆ ತಕ್ಕಂತೆ ವಿಭಿನ್ನವಾದ ರೂಪ ಪಡೆದು ನಡೆಯುತ್ತಿರುತ್ತದೆ. ಅದಕ್ಕೆ ಕನ್ನಡ ಸಂಸ್ಕೃತಿಯನ್ನು, ಅದರ ಹಲವು ರೂಪಗಳನ್ನು ಅಧ್ಯಯನ ಮಾಡಲು ಸಹಕಾರಿಯಾಗುವುದು ಜಾನಪದ ಅಧ್ಯಯನ. "ಬಾಲ ಕೃಷ್ಣನ ಬಾಯಲ್ಲಿ ಬೃಹ್ಮಾಂಡವೇ ಅಡಗಿದಂತೆ", ಜಾನಪದದಲ್ಲಿ ಒಟ್ಟು ಸಂಸ್ಕೃತಿಯೇ ಮಳಿತಗೊಂಡಿದೆ. ಜಾನಪದ ಜಗತ್ತಿನ ಮನುಕುಲದ ಸಂಸ್ಕೃತಿಯ ಹಾಗೂ ಎಲ್ಲಾ ಜ್ಞಾನ ವಿಜ್ಞಾನಗಳ ಜನನಿ, 'Old is Gold' ಎನ್ನುವಂತೆ ಇಂದಿನ ಸಮಾಜದಲ್ಲಿ ಜಾಗತೀಕರಣವೆಂದು ಹೆಸರು ಪಡೆದಿರುವುದಕ್ಕೆ ಜಾನಪದವೇ ಪೂರಕ, ಪ್ರೇರಕವಾಗಿದೆ. ಕರ್ನಾಟಕ ಇಂತಹ ಅತ್ಯಮೂಲ್ಯವಾದ ಜಾನಪದ ಸಂಪತ್ತಿನ ಆಗರವಾಗಿದೆ. ಜಾನಪದ ಸಂಪತ್ತಿನ್ನು ಪ್ರೋತ್ಸಾಹಿಸುವಲ್ಲಿ, ಬೆಳೆಸುವಲ್ಲಿ. ಉಳಿಸುವಲ್ಲಿ ಮತ್ತು ಅದು ಮಣ್ಣಲ್ಲಿ ಮರೆಯಾಗಿ ಹೋಗದಂತೆ ರಕ್ಷಿಸುವಲ್ಲಿ ಕರ್ನಾಟಕದ ವಿಶ್ವವಿದ್ಯಾನಿಲಯಗಳು, ಜಾನಪದ ಲೋಕ, ಕನ್ನಡ ಸಾಹಿತ್ಯ ಪರಿಷತ್ತು ಮತ್ತು ಇತರ ಸಂಘಸಂಸ್ಥೆಗಳೇ ಅಲ್ಲದೆ ನೂರಾರು ಜನ ಹಿರಿ – ಕಿರಿಯ ಕವಿಗಳು. ಕಲಾವಿದರು, ವಿದ್ವಾಂಸರು ತಮ್ಮನ್ನು ತಾವು ತಮ್ಮದೇ ಆದ ದಾರಿಯಲ್ಲಿ ವಿಭಿನ್ನವಾದ ಕ್ಷೇತ್ರಗಳಲ್ಲಿ ಅರ್ಪಣ ಮನೋಭಾವದಿಂದ ಕಾರ್ಯದಲ್ಲಿ ತೊಡಗಿಸಿಕೊಂಡಿದ್ದಾರೆ. ಈ ನಿಟ್ಟಿನಲ್ಲಿ ತಮ್ಮನ್ನು ತಾವು ದುಡಿಸಿಕೊಳ್ಳತ್ತಿರುವ ಕವಿ ಪುಂಗವರಲ್ಲಿ ಒಬ್ಬರಾದ ಯುವಕವಿ ಡಾ. ಹೆಬ್ಬಾಲೆ ನಾಗೇಶರವರ ಜೀವನದ ಬಗ್ಗೆ ಸಾಹಿತ್ಯಲೋಕ್ಕಕೆ ಅವರ ಜನಪದೀಯ ಕೊಡುಗೆಯನ್ನು ವಿವೇಚಿಸುವ ಕಾರ್ಯದಲ್ಲಿ ತೊಡಗಿದ್ದೇನೆ. ಈ ಮೂಲಕ ಕರ್ನಾಟಕ ಜಾನಪದ ಅಧ್ಯಯನದ ಜಾಗೃತಿಗೆ ಹೊಸ ಆಯಾಮವನ್ನು ನೀಡಲು ಪ್ರಮಾಣಿಕವಾಗಿ ಪ್ರಯತ್ನಿಸಿದ್ದೇನೆ.

ಕರ್ನಾಟಕ ಜಾನಪದ ಅಧ್ಯಯನಕ್ಕೆ 100 ವರ್ಷ ತುಂಬುತ್ತಿದೆ. ಆದರೆ ಜಾನಪದಕ್ಕೆ ಸಂಬಂಧಿಸಿರುವ ಸರ್ವ ಸಾಮಗ್ರಿಗಳ ಸೃಷ್ಟಿಯ ಇತಿಹಾಸ ಸಾವಿರಾರು ವರ್ಷಗಳ ಹಿಂದಕ್ಕೆ ಕಣ್ತೆರೆದುಕೊಂಡಿದೆ. ಅಂತೆಯೇ ಪಂಪನಿಂದ – ಇಂದಿನವರೆಗೂ ಸುಧೀರ್ಘವಾಗಿ ಬೆಳೆದುಕೊಂಡು ಬಂದಿರುವ ಕನ್ನಡ ಸಾಹಿತ್ಯದ ಎಲ್ಲಾ ಘಟ್ಟಗಳು ಮತ್ತು ಅಂದೋಲನಗಳು ಹಾಗೂ ಪ್ರಮುಖ ಕಾವ್ಯಗಳೂ ಜನಪದ ಭಾಷೆ, ಸಾಹಿತ್ಯ, ಸಂಸ್ಕೃತಿಗಳಿಂದಲೇ ತಮ್ಮ ಅಂತರಾವರಣವನ್ನು ನಿರ್ಮಿಸಿಕೊಂಡಿವೆ ಎಂಬುದನ್ನು ಯಾರು ಮರೆಯಲಿಕ್ಕಾಗದು. ಈ ದೃಷ್ಟಿಯಿಂದ ನಮ್ಮ ಜಾನಪದದ ಶ್ರೀಮಂತಿಕೆಯನ್ನು,

ವೈವಿಧ್ಯತೆಯನ್ನು ಹಾಗೂ ಅದರ ಅರ್ಥಪೂರ್ಣತೆಯನ್ನು ಅರಿತು. 19 ನೇ ಶತಕದ ಕೊನೆಯಾರ್ಧದಲ್ಲಿ ಪಾಶ್ಚಾತ್ಯ ವಿದ್ವಾಂಸರು ಮೊದಲಿಗರಾಗಿ ಜನಪದ ಸಾಹಿತ್ಯದ ಸಂಗ್ರಹ ಮತ್ತು ರಸಸ್ವಾದನೆಯ ಕಾರ್ಯ ಆರಂಭಿಸಿದರು.

**ಉದಾ:** ಮೋಗ್ಲಿಂಗ್ – 'ಕನ್ನಡ ಗಾದೆಗಳು' ಚಾರ್ಲ್ಸ್ ಗೋವರ – 'ಜನಪದ ಹಾಡುಗಳು: ಸಂಗ್ರಹಣೆ, ಜಾನ್ ಫ್ಲೀಟ್ 'ಲಾವಣಿಗಳ ಸಂಗ್ರಹ'.

ಹೀಗೆ ಇನ್ನು ಕೆಲವು ಪಾಶ್ಚಾತ್ಯ ವಿದ್ವಾಂಸರು ಈ ಕ್ಷೇತ್ರದಲ್ಲಿ ದುಡಿದರು. ಇವರ ಉದ್ದೇಶ ಕನ್ನಡ ಜನಪದ ಸಾಹಿತ್ಯವನ್ನು ತಮ್ಮ ದೇಶದ ಜನರಿಗೆ ಪರಿಚಯ ಮಾಡಿಕೊಡುವುದೇ ಆಗಿತ್ತು. ಆದರೆ ಅಲ್ಲಿ ಅವರ ಉದ್ದೇಶವೇನೆ ಆಗಿದ್ದರೂ ಅವರು ಜನಪದ ಸಾಹಿತ್ಯದ ಸಂಗ್ರಹಣೆಗೆ ಬರೆದ ಟಿಪ್ಪಣೆ, ಪ್ರಸ್ತಾವನೆಗಳೇ ಕನ್ನಡ ಜನಪದ ಸಾಹಿತ್ಯ ಕುರಿತಾದ ಮೊದಲ ವಿಮರ್ಶೆಗಳಾಗಿದೆ. ಆದರೆ ಇವುಗಳು ಇಂಗ್ಲೀಷ ಭಾಷೆಗಳಲ್ಲಿ ಬಂದವುಗಳಾಗಿವೆ. ಈ ಕಾರ್ಯ ಕನ್ನಡಗರಿಂದ 1894ರಲ್ಲಿ ಆರಂಭವಾಯಿತು. ಇಲ್ಲಿ ಬಂದ ಮೊದಲ ಸಂಗ್ರಹ ಕಾರ್ಯ ಎಂದು ಹೇಳಬಹುದಾದ 'ಗಾದೆಗಳ ಸಂಕಲನ' ಕೆಲಸ ಹಣಮಂತ ಗೋವಿಂದ ಜೋಶಿ ಎನ್ನುವವರಿಂದ ನಡೆಯಿತು. ಇದು ಕನ್ನಡ ಜಾನಪದ ಸಾಹಿತ್ಯ ಕುರಿತಾದ ಅಧ್ಯಯನ ಕನ್ನಡಗರಿಂದ ನಡಯಲ್ಪಟ್ಟ ಮೊದಲ ಹೆಜ್ಜೆಯಾಗಿದೆ. ಎರಡನೇ ಹೆಜ್ಜೆ ಇಡ ಹೊರಟ 'ಕನ್ನಡಿಗರಿಗೆ 1931ರ ವರೆಗೆ ಸರಿಯಾದ ನೆಲೆ ಸಿಗಲಿಲ್ಲ. ಇಷ್ಟು ಅಂತರದ ಕಾಲದಲ್ಲಾದರೂ ಒಂದು ಒಳ್ಳೆಯ ಹಾಡುಗಳ ಸಂಗ್ರಹ ಸಂಪಾದನೆ ಕಾರ್ಯ ಹಲಸಂಗಿ ಗೆಳೆಯರಾದ (ರೇವಪ್ಪ ಕಾಪಸೆ, ದ.ರಾ.ಬೇಂದ್ರೆ ಹಾಗೂ) ಇವರಿಂದ 'ಗರತಿಯ ಹಾಡು' ಸಂಕಲನ ಹೊರ ಬಂತು. ಇದು ಜಾನಪದ ಅಧ್ಯಯನಕ್ಕೆ ಒಂದು ಹೆದ್ದಾರಿಯನ್ನು ತೆರೆಯಿತು. ಇದಕ್ಕೂ ಮುಂಚೆ ಕೆಲವೊಂದು ಲೇಖನಗಳು ಬಂದಿವೆ. ಶ್ರೀ ಹೆಚ್.ಕೆ. ಮಲ್ಲಪ್ಪನವರ 'ಕನ್ನಡ ಗಾದೆಗಳ ಜೀರ್ಣೋದ್ಧಾರ.

ಹೀಗೆ ಜನಪದ ಸಾಹಿತ್ಯಕ್ಕೆ ಮನಸೋತು. ಅನಕ್ಷರಸ್ಥರಿಂದ ರಚಿತವಾದ ಈ ಸಾಹಿತ್ಯವೂ ಶ್ರೇಷ್ಠವೆಂಬುದನ್ನು ಅರಿತು ಇದರಲ್ಲೂ ಉನ್ನತ ಮಟ್ಟದ ಸಾಹಿತ್ಯಿಕ ಮೌಲ್ಯಗಳಿವೆಯೆಂದು ಪ್ರತಿಪಾದಿಸಿ ಲೇಖನ ಬರದರು. ಅಭ್ಯಾಸ ತೀವ್ರಗತಿಯಲ್ಲಿ ಮುಂದುವರೆಯಿತು. ವೈಚಾರಿಕತೆ ಬೆಳೆಯಿತು. ಅದರ ಗುಣ ಅವಗುಣಗಳನ್ನು ಚರ್ಚಿಸಿ. ವಿವಿಧ ದೃಷ್ಟಿಕೋನಗಳಿಂದ ಮೌಲ್ಯಮಾಪನ ಮಾಡಬೇಕೆಂಬ ಪ್ರಜ್ಞೇ ಮೂಡಿತು. ಹೀಗೆ ಅಧ್ಯಯನದ ಸಂಕ್ರಮಣ ಕಾಲ ಶುರುವಾಯಿತು. ಇಲ್ಲಿಂದ ಮುಂದೆ ಅನೇಕ ಕವಿ ವಿದ್ವಾಂಸರು ತಮ್ಮನ್ನು ಈ ಕಾರ್ಯದಲ್ಲಿ ತೊಡಗಿಸಿಕೊಂಡರು. ಮಧುರ ಚೆನ್ನರು, ಮಲೆಘಟ್ಟ ಕೃಷ್ಣಮೂರ್ತಿ. ಎಲ್. ಗುಂಡಪ್ಪ, ನಾ ಕಸ್ತೂರಿ. ಶ್ರೀ ಅಚಪ್ಪ, ಶ್ರೀ ಎನ್. ಅನಂತರಂಗಾಚಾರ್ಯ ಪ್ರೋ. ವ್ಹಿ. ಈ. ಕುಲಕರ್ಣಿ ಮಿರ್ಜಿ ಅಣ್ಣಾರಾಯ ಶ್ರೀ ಅನಂತ ಪದ್ಮನಾಭ ಉತ್ತಂಗಿ ಚೆನ್ನಪ್ಪ ಡಿ.ಎಲ್. ಗುಂಡಪ್ಪ. ಮಾಸ್ತಿ, ಬಿ. ಎಂ. ಶ್ರೀ. ದೇವುಡು

ಗೋರೂರು.ತೀ.ನಂ. ಶ್ರೀ. ಚೆನ್ನವೀರ ಕಣವಿ. ಮುದೇನೂರು ಸಂಗಣ್ಣ ಚಿದಾನಂದಮೂರ್ತಿ. ಸಿಂಪಿಲಿಂಗಣ್ಣ, ಜಿ. ವರದರಾಜ ರಾವ್. ಪ್ರಭಶಂಕರ್, ತರಾಸು, ದೇಜವರೆ ಗೌಡ, ಶ್ರೀ ಹೆಚ್.ಎಮ್. ಶಂಕರನಾರಾಯಣ, ಎ.ಕೆ. ರಾಮಾನುಜನ್, ಬಿ.ಎಸ್. ಗದ್ದಗಿಮಠ. ಎಮ್.ಎಸ್. ಸುಂಕಾಪ್ರರ ಚಂದ್ರಶೇಖರ ಪ್ರತಾಳ, ಕ್ಯಾತನ ಹಳ್ಳಿ ರಾಮಣ್ಣ, ಡಾ. ಎಲ್.ಆರ್. ಹೆಗಡೆ, ಶ್ರೀ ಮರಳುಸಿದ್ದಪ್ಪ, ಆರ್.ಸಿ. ಹೀರೆಮಠ, ಹಾ. ಮಾ. ನಾಯಕ್ ಗಿರಡ್ಡಿಗೋವಿಂದರಾಜ್, ಪ್ರೋ.ಬಿ.ವ್ಹಿ. ಮಲ್ಲಾಪೂರ ಎಂ. ಎಂ. ಕಲಬುರ್ಗಿ. ಶ್ರೀ ಜ್ಯೋತಿ ಹೊಸೂರು, ಜಗನ್ನಾಥ ಹೆಬ್ಬಾಲೆ, ಕೆ. ನಾಗೇಶರವರು ಅರಿತು ಆ ಕಡೆ ನಮ್ಮ ಗಮನ ಸೆಳೆದವರು ಪಾಶ್ಚಾತ್ಯರು ಅವರು ಯಾವುದೋ ಉದ್ದೇಶಕ್ಕಾಗಿ ಬಂದರು ಸಹ ಹಲವು ವಿಷಯಗಳ ಬಗ್ಗೆ ನಮ್ಮಲ್ಲಿ ಕುತೂಹಲ ಉಂಟಾಗುವಂತೆ. ಜಾಗೃತಿ ಮೂಡುವಂತೆ ಮಾಡಿದರು. ಹೀಗೆ 100 ವರ್ಷಗಳ ಹಿಂದೆ ಅವರಿಂದ ಆರಂಭವಾಧ ಹೆಜ್ಜೆ ಇಲ್ಲಿವರೆಗೂ ನಿಲ್ಲದೆ ಸಾಗುತ್ತಿದೆ.

ಜಾನಪದದ ವಿವಿಧ ಮುಖಗಳ ಬಗ್ಗೆ ನಮ್ಮ ವಿದ್ವಾಂಸರ ಆಸಕ್ತಿ ಅಭಿಮಾನಪೂರ್ವಕವಾಗಿ ಟಿಸಿಲೊಡೆದಿರುವುದು ಈ ರೀತಿಯಾಗಿ ಕಾಣಬಹುದು. ಜಾನಪದದ ಸಾಹಿತ್ಯ ಶೋಧನೆ. ಸಂಗ್ರಹ ಪ್ರಕಟಣೆ ಮತ್ತು ವ್ಯಾಖ್ಯಾನಗಳಲ್ಲಿ ತಮ್ಮನ್ನು ಅವರು ಪ್ರೀತಿಯಿಂದಲೇ ತೊಡಗಿಸಿಕೊಂಡರು.

ಕನ್ನಡ ಕಾವ್ಯಲೋಕದಲ್ಲಿ ಖ್ಯಾತರಾದ ಬಿ.ಎಂ. ಶ್ರೀಯವರು ಜಾನಪದದ ಬಗ್ಗೆ ಎತ್ತಿದ ಉದ್ಗಾರ "ಜನವಾಣಿ ಬೇರು ಕವಿವಾಣಿ ಹೂವು". ಅರ್ಥಪೂರ್ಣವಾಗಿ ಅದರೆಲ್ಲಾ ಅರಿವಿನೊಡನೆ ತೆಗೆದಿದ್ದ ಒಂದು ಮಹತ್ವದ ಹಾಗೂ ಐತಿಹಾಸಿಕದ ಘಟ್ಟ. ಅಲ್ಲಿಂದ ಕನ್ನಡದ ವಿದ್ವತ್ ಪರಂಪರೆ ಅದುವರೆವಿಗೂ ಮೂಕವಾಗಿದ್ದ ಜಾನಪದ ಶಿಲಾಬಾಲಿಕೆಯನ್ನು. ದೇವತೆಯಾಗಿಸುವು ಅಥವಾ ಬೊಂಬೆಯಾಗಿಸುವ ಅಥವಾ ಬಾಲಿಕೆಯಾಗಿ ಪರಿವರ್ತಿಸುವ ಕಾರ್ಯ ಆರಂಭವಾಯಿತು. ಈ ಕಾರ್ಯದಲ್ಲಿ ತೊಡಗಿದ ಪ್ರಮುಖ ಕವಿಗಳೆಂದರೇ ಬಿ.ಎಂ.ಶ್ರೀ. ದ.ರಾ.ಬೇಂದ್ರೆ, ಕನ್ನಡದ ಆಸ್ತಿಯೆಂದೇ ಪ್ರಸಿದ್ಧರಾದ ಮಾಸ್ತಿ ಅರ್ಚಕ ರಂಗಸ್ವಾಮಿ, ಗೋರೂರು. ತೀ.ನಂ.ಶ್ರೀ. ಕಾರಂತ, ಸಿಂಪಿ ಲಿಂಗಣ್ಣ. ದೇವುಡು ಬೇಟಗೇರಿ ಕೃಷ್ಣಶರ್ಮ, ಹೀಗೆ ಮುಂತಾದ ಶಿಷ್ಟ ಸಾಹಿತ್ಯ ಲೋಕದ ಪರಿಣಿತರು ಜನಪದ ಸಾಹಿತ್ಯ ಮತ್ತು ಸಂಸ್ಕೃತಿಗಳ ಬಗ್ಗೆ ಅಧ್ಯಯನ ಮತ್ತು ಚಿಂತನೆಗಳನ್ನು ನಡೆಸಿ ಲೇಖನಗಳನ್ನು. ಪ್ರಕಟಿಸಿ ಸದ್ದಿಲ್ಲದೇ ಸಾಹಿತ್ಯ ಲೋಕದೊಳಗೊಂದು ಹೊಸ ಆಂದೋಲನವನ್ನು ಪ್ರಾರಂಭಿಸಿದರು. ಇದನ್ನೇ ನಾವು ಜಾನಪದ ಸಾಹಿತ್ಯಾಧ್ಯಯನದ ಮೊದಲ ಘಟ್ಟವೆಂದು ಕರೆಯುತ್ತೇವೆ. ಈ ಘಟ್ಟದಲ್ಲಿ ನವೋದಯ ಸಂಪ್ರದಾಯದ ಅಭಿರುಚಿಯನ್ನು ಒಳಗೊಂಡ ರಾಷ್ಟ್ರಪ್ರೇಮ ಮತ್ತು ಸಂಸ್ಕೃತಿಗಳ ಮುಖ್ಯ ನೆಲೆಯಿಂದ ಪ್ರೇರೆಪಿತವಾದ ಆಶಯ ಜಾನಪದವನ್ನು ಮುಖ್ಯವಾಗಿ ಜನರ ಸಾಹಿತ್ಯವಾಗಿಯೇ ಪರಿಗಣಿಸಿ ಜನಪದ ಸಾಹಿತ್ಯದ ಸಂಗ್ರಹ. ಪ್ರಕಟಣೆ, ಮತ್ತು

ಅವುಗಳ ಅರ್ಥ ಅವುಗಳ ಉದ್ದೇಶ ಏನೆಂಬುದರ ಕೇಂದ್ರ ಬಿಂದುವಿನ ಮೇಲೆ ವ್ಯಾಖ್ಯಾನಗಳನ್ನು ನೀಡುವಲ್ಲಿ ನಿರಂತರಾದರು. ಅದರಲ್ಲಿ ಕೆಲವರು ಜನಪದ ಹಾಡುಗಳನ್ನು ತಮ್ಮ ಸಾಹಿತ್ಯಗಳಲ್ಲಿ ಉದಾಹರಿಸಿ ಅವುಗಳಿಗೆ ಸ್ವಾರಸ್ಯವನ್ನು ವಿವರಿಸಿ ಉಲ್ಲೇಖಿಸಿದ್ದರು. ಇವರಲ್ಲಿ ಇನ್ನು ಕೇಲವರು ಆ ಜನಪದರ ಹಾಡುಗಳನ್ನು ಮೂಲ ಮಟ್ಟುಗಳಲ್ಲಿ ಹಾಡುತ್ತಾ ಅವುಗಳ ಸರಳತೆಯನ್ನು, ಸ್ಪಷ ತೆಯನ್ನು, ಸಂಗೀತಮಯ ಸ್ವಚ್ಛಂದತೆಯನ್ನು ಪ್ರಚಾರ ಮಾಡುತ್ತಾ ನಡೆದು ಹಾಡುಗಳ ಬಗ್ಗೆ ಜನರಲ್ಲಿ ದಾಹವನ್ನು ಹೆಚ್ಚಿಸಿದ್ದರು. ಅವುಗಳಲ್ಲಿನ ನೈತಿಕ ಮೌಲ್ಯ. ಧೋರಣೆ, ಸಮಾಜದ. ಸುವ್ಯವಸ್ಥೆಯ ಬಗೆಗಿನ ಕಾಳಜಿ ನಂಬಿಕೆ. ಸಂಪ್ರದಾಯ ಎಲ್ಲವನ್ನು ಅರ್ಥೈಯಿಸಿಕೊಂಡು. ವರ್ತಮಾನದಲ್ಲಿ ಅವುಗಳು ಬಳಸಿಕೊಳ್ಳುವ ಹಂಬಲ ಜನರಲ್ಲಿ ಮೂಡಿಸಿತು. ಇಲ್ಲಿನ ಪ್ರಮುಖವಾದ ಗುರಿಯೆಂದರೆ ಹಾಡುಗಳ ಸಾರಗ್ರಹಣ ಮತ್ತು ಪ್ರಸಾರವೇ ಆಗಿದೆ.

ಜಾನಪದ ಸಾಹಿತ್ಯಧ್ಯಯನದ ಎರಡನೇ ಹಂತದಲ್ಲಿ ಮೊದಲನೇ ಹಂತದ ಉದೇಶ ಇನ್ನು ವಿಭಿನ್ನವಾಗಿಯೂ, ವ್ಯಾಪಕವಾಗಿಯೂ ನಡೆಯಿತು. ಈ ದಾರಿ ಸಾಗಿದ ರೀತಿಯೆಂದರೆ ಸಾಹಿತ್ಯದ ಜೊತೆ–ಜೊತೆಗೆ ಜಾನಪದೀಯರ ನಿತ್ಯದ ಬದುಕನ್ನು ಅಭ್ಯಸಿಸಿ, ಸಾಹಿತ್ಯದ ವಿವಿಧ ರೂಪಗಳಾದ, ಗೀತೆ, ಗಾದೆ, ಒಗಟು, ಕಥೆಗಳೆಲ್ಲವುದರ ಜೊತೆಗೆ ಜಾನಪದೀಯ ಸಾಂಸ್ಕೃತಿಕ ಬದುಕಿನ ವಿಭಿನ್ನ ಕಸುಬುಗಳಾದ. ಉಡುಗೆ – ತೊಡುಗೆ, ಊಟೋಪಚಾರ ಆಚರಣೆ – ಸಂಪ್ರದಾಯಗಳು, ನಂಬಿಕೆಗಳು, ಮನೋರಂಜನಾ ಕ್ರಿಯೆಗಳು. ಹೀಗೆ ವೈವಿಧ್ಯಪೂರ್ಣ ಸಂಪ್ರದಾಯ ಕಲೆಗಳ ಬಗ್ಗೆ ಪ್ರಾದೇಶಿಕ ನೆಲೆಯೋಳಗೆ ಹಾಗೂ ಕಾಲಮಿತಿಗಳ ಚೌಕಟ್ಟಿನೊಳಗೆ ವಿಸ್ತಾರವಾದ ಕ್ಷೇತ್ರಕಾರ್ಯಗಳು, ಹುಡುಕಾಟಗಳು (ಸಂಶೋಧನೆಗಳು) ನಡೆದು. ಒಂದೇ ನೆಲೆಗಟ್ಟಿನಲ್ಲಿ. ಒಂದೇ ಆಶಯದಿಂದ ಕುಡಿಯೋಡೆದ ಜನಪದ ಸಂಸ್ಕೃತಿಯೊಂದು ಭಿನ್ನ ಭಿನ್ನ ಪ್ರದೇಶಗಳಲ್ಲಿ, ಬೇರೆ ಬೇರೆ ಕಾಲಘಟ್ಟಗಳಲ್ಲಿ ಯಾವ ರೀತಿ ವೈವಿಧ್ಯಮಯತೆಯನ್ನು ಪಡೆದು ಬಹುಮುಖವನ್ನು ಹೊಂದಿದೆ ಎಂಬುದನ್ನು ಅರಿತು ಅವುಗಳನ್ನು ಒಂದು ತಾತ್ವಿಕ ನೆಲೆಯಲ್ಲಿ ವಿವೇಚಿಸಿ ಜನತೆಯ ಎದುರಿಗೆ ಮಂಡಿಸುವ ಕೆಲಸ ಮಾಡಿದರು.

ಎರಡನೇ ಘಟ್ಟದ ಜಾನಪದ ಸಾಹಿತ್ಯದ ಅಧ್ಯಯನಕಾರರಿಂದ ಜಾನಪದ ಜಗತ್ತಿನ ವಿಸ್ತಾರ ಮತ್ತು ಸೂಕ್ಷ್ಮತೆಗಳ ಬಗ್ಗೆ ಪರಿಜ್ಞಾನ ಮೂಡುವುದರೊಂದಿಗೆ ಇದು ಕೂಡ ವಿಶ್ವವಿದ್ಯಾಲಯ ಮಟ್ಟದ ಅಧ್ಯಯನದ ವಿಷಯವಾಗಬಲ್ಲದು. ಇತರ ಸಾಹಿತ್ಯಗಳಂತೆ ಜ್ಞಾನ ಪ್ರಸಾರದಲ್ಲಿ ತೊಡಗುವುದು. ಅಂತರ್ ರಾಷ್ಟ್ರೀಯ ಮಟ್ಟದಲ್ಲಿ ವ್ಯವಹರಿಸುವುದು ಎಂಬ ತನ್ನ ವಿದ್ವತ್ತತೆಯನ್ನು ಜಾನಪದವೆಂದರೆ ಅದೊಂದು ಅನಕ್ಷರ ಕುಕ್ಷಿಗಳಿಗೆ ಮೀಸಲಾಗಿರುವ ರೂಪವೆಂದು ಹಿಯ್ಯಾಳಿಸುವವರ ಎದುರಿಗೆ ಬಿಚ್ಚಿಡಲು ಅಭ್ಯಸಿಸುವ ಕಾರ್ಯಕ್ಕೂ ಮನ್ನಣೆಯನ್ನು ದೊರಕಿಸಿತು. ಹೀಗೆ ಜಾನಪದ ಸಾಹಿತ್ಯ ಆಧುನಿಕ ಲೋಕದಲ್ಲೂ ತನ್ನ ವಿಸ್ತೃತ ರೂಪದಿಂದ ವ್ಯವಹರಿಸುವಂತೆ ಮಾಡಿತ್ತು.

ಇನ್ನು ಜಾನಪದದ 2ನೇ ಘಟ್ಟದಲ್ಲಿ ಅಂತರಾಷ್ಟ್ರೀಯ ಮಟ್ಟದಲ್ಲಿ ಜಾನಪದ ಕ್ಷೇತ್ರದಲ್ಲಿ ನಡೆಯುತ್ತಿರುವ ಚಿಂತನೆಗಳನ್ನು ಚರ್ಚೆಗಳನ್ನು ಸಂಶೋಧನೆಗಳೆಲ್ಲವನ್ನು ಕರ್ನಾಟಕ ಜಾನಪದಕ್ಕೂ ಅನ್ವಯಿಸಿ ಅಧ್ಯಯನಕ್ಕೆ ಅನ್ವಯಿಸಿಕೊಂಡು ಹೊಸ ರೀತಿಯ ವಿಶ್ಲೇಷಣೆ, ಸಿದ್ಧಾಂತ ಮತ್ತು ಚಿಂತನೆಗಳನ್ನು ನಮ್ಮ ಜಾನಪದ ರೂಪಿಸಿಕೊಂಡಿರುವುದು. ಬಹುಮಟ್ಟಿಗೆ ಗ್ರಾಮೀಣ ಬದುಕಿನ ಮಧ್ಯದಿಂದ ಎದ್ದುಬಂದ ಹೊಸ ಕಾಲದ ವಿದ್ವಾಂಸರು ಮತ್ತು ಕೆಲಮಟ್ಟಿಗೆ ಶಿಷ್ಟತೆಯ ಒಡಲಿನಿಂದ ಹುಟ್ಟಿಬಂದ ಕೆಲವು ಪ್ರಗತಿಪರ ಚಿಂತಕರು ಈ ನಿಟ್ಟನಲ್ಲಿ ಶ್ರದ್ಧಾಪೂರ್ವಕವಾಗಿ ತಮ್ಮನ್ನು ತೊಡಗಿಸಿಕೊಂಡು ಕೆಲಸ ಮಾಡಿದರು ಈ ಕಾರ್ಯ ಪ್ರೊ॥ ದೇ. ಜವರೇಗೌಡ. ಪ್ರೊ॥ ಹಾ.ಮಾ. ನಾಯಕ್. ಪ್ರೊ॥ ಜೀ.ಶ. ಪರಮಶಿವಯ್ಯ ಮುಂತಾದವರ ನೇತೃತ್ವದಲ್ಲಿ ಸಾಗಿತ್ತು. ಅನೇಕ ಕವಿ, ವಿದ್ವಾಂಸರುಗಳೇ ಅಲ್ಲದೆ ಇಲ್ಲಿ ಸಂಘಸಂಸ್ಥೆಗಳು ಕಾರ್ಯನಿರತವಾದವು ಇನ್ನು ಕೆಲವು ಕಾರ್ಯದಲಿ ತೊಡಗಿಸಿಕೊಂಡವರಿಗೆ ಪ್ರೋತ್ಸಾಹ. ಉತ್ತೇಜನವನ್ನು ನೀಡಿದವು, ಇದರಲ್ಲಿ ಪ್ರಮುಖವಾದವುಗಳೆಂದರೆ, ಮೈಸೂರು, ವಿ.ವಿ. ಕರ್ನಾಟಕ ವಿಶ್ವವಿದ್ಯಾಲಯ, ಬೆಂಗಳೂರು ವಿ.ವಿ. ಕುವೆಂಪು ವಿಶ್ವವಿದ್ಯಾಲಯ. ಜಾನಪದ ಲೋಕ, ಉಡುಪಿಯ ಜಾನಪದ ಅಧ್ಯಯನ ಕೇದ್ರ ಕನ್ನಡ ವಿ.ವಿ. ಸಾಹಿತ್ಯ ಪರಿಷತ್ತು. ಅನೇಕ ಮಾಸ ಪತ್ರಿಕೆಗಳು. ನಿಯತಕಾಲಿಕೆಗಳು, ಈ ನಿಟ್ಟಿನಲ್ಲಿ ದುಡಿಯುತ್ತಿವೆ.

ಈ ರೀತಿಯಾದ ಅಪಾರ ಸಂಖ್ಯೆಯ ವಿದ್ವಾಂಸರಿಂದ ವಿಭಿನ್ನ ನೆಲೆಗಳಲ್ಲಿ ಕೆಲಸ ನಡೆದಿರುವುದು ಜಾನಪದ ವಿದ್ವತ್ತಿನ ಕ್ಷೇತ್ರವನ್ನು ವಿಸ್ತರಿಸಿದೆ. ಇಡೀ ನಮ್ಮ ರಾಷ್ಟ್ರದಲ್ಲಿಯೇ ಜಾನಪದ ಕ್ಷೇತ್ರದಲ್ಲಿ ಈ ಮಟ್ಟಿಗೆ ವಿಫುಲವಾಗಿ ಅಭ್ಯಾಸಪೂರ್ಣ ಜಾನಪದ ಕಾಳಜಿ ವ್ಯಕ್ತವಾಗುತತಿರುವುದು. ಕರ್ನಾಟಕದಲ್ಲೇ ಎಂಬುದು ಗ್ರಹಿಸಬೇಕಾಗಿದೆ. ಆದರೆ ಪೂರ್ಣಪ್ರಮಾಣದಲ್ಲಿ ತಮ್ಮನ್ನು ತೊಡಗಿಸಿಕೊಂಡಿರುವುದು ಕಡಿಮೇ ಎಂದೇ ಹೇಳಬೇಕು. ಇಂಥ ಹಲಕೆಲವರಲ್ಲಿ ನಮ್ಮ ಉತ್ತರ ಕರ್ನಾಟಕದವರ ಕೊಡುಗೆಯೂ ಹೆಚ್ಚಾಗಿರುವುದನ್ನು ಕಾಣಬಹುದು ಅಂತಹ ವಿದ್ವಾಂಸರಲ್ಲಿ. ಯುವಕವಿ, ಪ್ರತಿಭಾಸಂಪನ್ನರಾದ ಹೆಬ್ಬಾಲೆಯವರು, ತನ್ನ ವ್ಯಕ್ತಿತ್ವ ಗುರುತಿಸಿಕೊಂಡಿರುವುದು ಜಾನಪದ ಬರಹದಲ್ಲಿಯೇ. ಜಾನಪದ ಜೀವನದ ರೀತಿ ನೀತಿ ಸಂಸ್ಕೃತಿ. ಆಚಾರ ವಿಚಾರ, ಅವರಲ್ಲಿನ ಬಡತನ, ಅನಕ್ಷರತೆ ನೋವು – ನಲಿವು. ಮೂಢನಂಬಿಕೆ. ಸಂಪ್ರದಾಯ. ಆಚರಣೆಗಳನ್ನು ಹತ್ತಿರದಿಂದ ಕಂಡು ಲೇಖನದಲ್ಲಿ ಹಿಡಿದಿಟ್ಟಿದ್ದಾರೆ. ಅವರ ದಲಿತ ಪ್ರಜ್ಞೆ, ಸ್ತ್ರೀ ಸಂವೇದನೆಯಂತೂ ಮನಕಲಕುವ ಕರಣಾಜನಕ ಬರಹಗಳು ಸಹೃದಯನ ಮುಂದೆ ಶಬ್ದಚಿತ್ರಗಳಾಗಿ ನಿಲ್ಲುತ್ತವೆ. ಹೀಗೆ ಅವರ ಜಾನಪದ ಬರಹ ಅಂದಿನ ಸಂಸ್ಕೃತಿಯಿಂದ ಎದ್ದು ಬಂದು ವರ್ತಮಾನದೊಂದಿಗೆ ವ್ಯವಹರಿಸುವ, ಪ್ರತಿಭಟಿಸುವ. ವಿಮರ್ಶಿಸುವ ಪ್ರಯೋಗಶೀಲ ಗುಣವನ್ನು ಸೃಜನಶೀಲ ಅಂಶವನ್ನು (ಮೌಲ್ಯವನ್ನು) ಪಡಿದಿವೆ. ಇವರ ಬರಹಗಳು ಜಾನಪದ ಕ್ಷೇತ್ರಕ್ಕೊಂದು

ಕೊಡುಗೆಯಾಗಿದೆ. ಇವರ ಬರಹಗಳು ಜಾನಪದ ಕ್ಷೇತ್ರಕ್ಕೊಂದು ಅಮೂಲ್ಯ ಕೊಡುಗೆಯಾಗಿವೆ.

ಪೂರ್ಣಪ್ರಮಾಣದಲ್ಲಿ ತಮ್ಮನ್ನು ಜಾನಪದ ಕ್ಷೇತ್ರಕ್ಕೆ ಅರ್ಪಿಸಿಕೊಂಡು ಕಾರ್ಯನಿರತರಾಗಿರುವ ಡಾ॥ ಹೆಬ್ಬಾಲೆಯವರ ಬದುಕು – ಬರಹಗಳ ಕುರಿತು ಅಧ್ಯಯನ ಮಾಡಿರುವುದರ ಮೊತ್ತವೇ ಈ ಪ್ರಬಂಧವಾಗಿದೆ. ಈ ಪ್ರಬಂಧದಲ್ಲಿ ಹೆಬ್ಬಾಲೆಯವರ ಬರಹಗಳನ್ನು ವಿಭಿನ್ನವಾದ ನಲೆಗಟ್ಟಿನಲ್ಲಿರಿಸಿ ಅಭ್ಯಸಿಸುವ ಪ್ರಯತ್ನ ಸಾಗಿದೆ. ಅಲ್ಲದೆ ಯಾವುದೇ ಸಾಹಿತಿಯ ಬದುಕು – ಬರಹಳೆರೆಡು ಒಂದು ನಾಣ್ಯದ ಎರಡು ಮುಖಗಳಿದ್ದಂತೆ, ಒಂದನ್ನು ಹೊರತುಪಡಿಸಿ ಇನ್ನೊಂದರ ಬಗೆಗಿನ ಜ್ಞಾನ ಇಡೀ ನಾಣ್ಯದ ಬಗೆಗಿನ ಜ್ಞಾನವಾಗುವುದಿಲ್ಲ ಮತ್ತು ಒಂದರ ಪಡಿನೆಳಲು ಇನ್ನೊಂದರಲಿಲ ಪ್ರತ್ರೇಕ್ಷವಾಗಿಯೋ ಪರೋಕ್ಷವಾಗಿಯೋ ಬಿದ್ದಿರುತ್ತದೆ.

"ಯಥಾ ರಾಜ ತಥಾ ಪ್ರಜಾ", "ಹಿರಿಯಕ್ಕನ ಚಾಳಿ ಮನೆಮಂದಿಗೆಲ್ಲ" ಎನ್ನುವಂತೆ ಬದುಕಿನ ರೀತಿ – ನೀತಿಗಳು ಸಾಹಿತ್ಯದಲ್ಲಿ ಪ್ರತಿಬಿಂಬಿಸುತ್ತವೆ. ಸಾಹಿತ್ಯ ರಚನೆಯಿಂದ ಬದುಕಿನಲ್ಲಿ ಪಲ್ಲಟಗಳು ಬರುತ್ತವೆ ಅನ್ನುವ ಮಾತು ಸತ್ಯ ಶುದ್ಧವಾಗಿರುವುದರಿಂದ ಅವರ ಬರಹಗಳನ್ನೆ ಅಭ್ಯಸಿಸುವ. ಉದ್ದೇಶ ಹೊಂದಿದ ನಾನು ಅವರ ಬರಹಗಳೊಂದಿಗೆ ಅವರ ಬದುಕನ್ನು ಅಂದರೆ ಅವರು ನಡೆದು ಬಂದ ಹೆಜ್ಜೆ – ಹೆಜ್ಜೆಗಳನ್ನು ಅಧ್ಯಯನದಲ್ಲಿ ಅಳವಡಿಸಿದ್ದೇನೆ. ಅವರ ಜೀವನದ ಪ್ರತಿಯೊಂದ ಸಿಹಿ – ಕಹಿ ಅನುಭವಗಳು ಸಹ ಲೇಖನದಲ್ಲಿ ಪಡಿಮೂಡಿರುತ್ತವೆ.

# ಸ್ವರೂಪ

ಪ್ರಸ್ತುತ ಪ್ರಬಂಧವು ಡಾ. ಹೆಬ್ಬಾಲೆ, ಕೆ. ನಾಗೇಶರವರ ಮೆನತನ, ಬಾಲ್ಯ, ಶಿಕ್ಷಣ, ಸಾಧನೆಯ ಮೆಟ್ಟಿಲುಗಳು. ಅದಕ್ಕೆ ಸಂದ ಗೌರವಗಳು, ಅವರ ಬರಹಗಳ ಬಗ್ಗೆಗಿನ ಮಾಹಿತಿಯನ್ನು ಆವರಿಸಿಕೊಂಡಿವೆ. ಶ್ರೀಯುತ ಹೆಬ್ಬಾಲೆಯವರು ತಮ್ಮ ತನು ಮನಗಳ. ಕಾರ್ಯ, ಆಲೋಚನೆಗಳನ್ನು ಪೂರ್ಣಪ್ರಮಾಣದಲ್ಲಿ ಜಾನಪದ ಅಧ್ಯಯನದಲ್ಲಿ ತೊಡಗಿಸಿದ ಹಲ – ಕೆಲವು ಕವಿಗಳಲ್ಲಿ ಒಬ್ಬರಾಗಿದ್ದಾರೆ ನಮ್ಮ ಜಾನಪದದ ಮಹತ್ವವನ್ನು ನಾವು ಪಾಶ್ಚಾತ್ಯರಿಂದಾಗಿ ಅರಿತೆವು ಅಲ್ಲಿಂದ ಇಲ್ಲಿವರೆಗೂ – ಇಲ್ಲಿಂದ ಮುಂದೆಯೂ ಜಾನಪದ ಸಾಹಿತ್ಯವನ್ನು ಸಂಪಾದಿಸುವ, ಸಂಗ್ರಹಿಸುವ. ಪ್ರಕಟಿಸುವ, ಅದರ ಆಳ – ಅಗಲಗಳನ್ನು ಜನರಿಗೆ ದರ್ಶಿಸುವ, ಅದರ ಗುಣಾವಗುಣಗಳನ್ನು ಚರ್ಚಿಸುವ, ವಿಮರ್ಶಿಸುವ ಜಾನಪದವನ್ನು ಅಂತರ್ ಶಿಸ್ತೀಯ ಅಧ್ಯಯನಕ್ಕೆ ಒಳಪಡಿಸುವ ಮತ್ತು ಜಾಗತೀಕರಣದಲ್ಲೂ ಅದರ ನಿಶ್ಚಲವಾದ. ನಿಶ್ಯಬ್ದವಾದ. ನಿರಂತರವಾದ. ಇರುವಿಕೆಯನ್ನು ಹರಿಯುವಿಕೆಯನ್ನು, ಗುರುತಿಸುವ ಕಾರ್ಯಗಳು ಆಮೆಯ ವೇಗದಲ್ಲಿ ಸಾಗಿವೆ. ಆದರೂ ಇನ್ನು ಮುಂದೆಯೂ ಈ ಕೆಲಸ ನಡೆಯುವ ಅಗತ್ಯತೆ ಇದೆ ಅದು ತೀವ್ರಗತಿಯಲ್ಲಿ ನಡೆಯಬೇಕು.

ಈ ವರೆಗೆ ಸಾಹಿತ್ಯಾಧ್ಯಯನ ನಡೆದು ಬಂದ ಪರಂಪರಾಗತವಾದ ದಾರಿ. ಅಲ್ಲಿ ನಡೆದ ವಿವಿಧ ನೆಲೆಯಲ್ಲಿನ ಚರ್ಚೆಗಳು, ಅವುಗಳ ಗುಣದೋಷಗಳು. ಇನ್ನು ನಡೆಯಬೇಕಾದ ಕಾರ್ಯಗಳ ಅರಿವು ಎಲ್ಲವನ್ನು ಒರೆಗೆ ಹಚ್ಚಿ ತನ್ನದೆ ಆದ ಜಾನಪದೀಯ ಭಾಷೆ, ಶೈಲಿ, ಅನುಭವ, ಕಲ್ಪನೆ. ಜ್ಞಾನಗಳ ಹಿನ್ನಲೆಯಲ್ಲಿ ಓದುಗರಿಗೆ ಬೇಕಾದ ಹೊಸ ಪ್ರಯೋಗಶೀಲತೆಯ ತಿರುವು ಎಲ್ಲವನ್ನು ಬೆರೆಸಿದ ಪಾಕದಿಂದ ಸಾಹಿತ್ಯ ಹನಿಗಳನ್ನು ಸುರಿಸಿದ ಯುವಕವಿ. ಮುಂದಿನ ದಿನಗಳಲಿ ಹೊಸಗನ್ನಡ ಸಾಹಿತ್ಯಲೋಕದ ದಲಿತ – ಬಂಡಾಯ ಘಟ್ಟದ ಅಂಬರದಲ್ಲಿ ಹಗಲು – ರಾತ್ರಿಗಳನ್ನು ಪ್ರಕಾಶಿಸುವ ಸೂರ್ಯ – ಚಂದ್ರರ ಸಾಲಿಗೆ (ದೇವನೂರು ಮಹಾದೇವ – ಬರಗೂರು ರಾಮಚಂದ್ರ) ಸೇರ ಹೊರಟಿರುವ ಇನ್ನೊಂದು ತೇಜಸ್ಸು ಎಂದರೆ ಹೆಬ್ಬಾಲೆಯವರೇ ಎಂದು ಅವರ ಅರಳವ್ವ ಕಾದಂಬರಿಯಿಂದ ತಿಳಿದು ಬರುತ್ತದೆಂದು ಈಗರ್ಡಿ ನಗರ್ಲೆ ಯವರು ಹೇಳಿದ್ದಾರೆ. ಅದಕ್ಕಾಗಿ ಜಾನಪದ ಕ್ಷೇತ್ರದ ಇಂಥ ಒಬ್ಬ ಕವಿಯ ಬಗ್ಗೆ ಅಧ್ಯಯನದ ಅವಶ್ಯಕತೆಯನ್ನರಿತು, ಈ ಕರ್ಯಕ್ಕೆ ಮುಂದಾಗಿದ್ದು. ಅಧ್ಯಯನದ ಅನುಕೂಲಕ್ಕಾಗಿ ಪ್ರಬಂಧದಲ್ಲಿ 5 ಪಠ್ಯಕ್ರಮಗಳಾಗಿ ವಿಂಗಡಿಸಲಾಗಿದೆ.

ಮೊದಲನೆ ಒಂದು ಪಠ್ಯದಲ್ಲಿ ಅಧ್ಯಯನದ ಉದ್ದೇಶವನು ಪ್ರತಿಪಾದಿಸಲಾಗಿದ್ದು. ನಮ್ಮ ಜಾನಪದ ಅಧ್ಯಯನದ ಪ್ರಾರಂಭದ ದಿನಗಳು. ಅದರ ಪರಂಪರಯ ದಾರಿಯಲ್ಲಿ ಇರುವ ಹಲವಾರು. ಉದ್ದೇಶಗಳು ಯಾವುದು ಎನ್ನುವುದರ ಬಗ್ಗೆ ಬೆಳಕು ಚೆಲ್ಲಲಾಗಿದೆ. ಆ ನಿಟ್ಟಿನಲ್ಲಿ ನಮ್ಮ ಕರ್ನಾಟಕ ಜಾನಪದ ಇನ್ನು ತೀವ್ರವಾಗಿ ಅಭ್ಯಸಿಸುವ ಅಗತ್ಯತೆಯ

ದಾರಿಯಲ್ಲಿ ಸಾಗಿದ ಹೆಬ್ಬಾಲೆಯವರ ಜೀವನ ಮತ್ತು ಬರಹಗಳು ಅಧ್ಯಯನಕ್ಕೆ ನಾನು ಮುಂದಾದ ಬಗ್ಗೆ ವಿವರಣೆಯಿದೆ.

ಈ ಪ್ರಬಂಧದ ಎರಡನೇ ಹಂತವೇ ಹೆಬ್ಬಾಲೆಯವರ ಸಾಹಿತ್ಯ ಕ್ಷೇತ್ರದಲಿ ತೊಡಗಿಸಿಕೊಳ್ಳುವ ಪೂರ್ವದ ಜೀವನದ ಜೊತೆಗೆ ಸಾಹಿತ್ಯ ಕ್ಷೇತ್ರದಲ್ಲಿ ಕಾಲಿಟ್ಟ ನಂತರದ. ಬದುಕನ್ನು ಬಿತ್ತರಿಸಿ ಹೊರಟು ಆ ಜೀವನ ಅವರ ಆರ್ಥಿಕ, ಸಾಮಾಜಿಕ, ಸಾಂಸ್ಕೃತಿಕ, ಶೈಕ್ಷಣಿಕ ಕ್ಷೇತ್ರದಲ್ಲಿ ಯಾವ ರೀತಿಯಾಗಿ ನಡೆದುಕೊಂಡು ಬಂದಿದೆ. ಅಲ್ಲಿ ಅವರು ಕಂಡ ಏಳು – ಬೀಳು ಅದರಿಂದ ಅವರು ಪಡೆದ ಸ್ಫೂರ್ತಿ, ತಮ್ಮ ವ್ಯಕ್ತಿತ್ವ ವನ್ನು ಸಮಾಜದಲ್ಲಿ ಗುರುತಿಸಿಕೊಳ್ಳಲು ಅವರು ನಡೆಸಿದ ಹೋರಾಟ. ಅವರ ನಿರಂತರ ಮತ್ತು ಶೃದ್ಧಾಪೂರ್ವಕವಾದ ಪ್ರಯತ್ನೆಕ್ಕೆ ದಕ್ಕಿದ ಪ್ರತಿಫಲಗಳನ್ನು ತಿಳಿಸಲಾಗಿದೆ.

ಇನ್ನು ಮೂರನೇ ಹಂತದಲ್ಲಿ ಹೆಬ್ಬಾಲೆಯವರ ಕೃತಿಗಳನ್ನು ಇರಿಸಿಕೊಂಡು, ಪ್ರಮುಖವಾದ ವಿಷಯಗಳ ತಾತ್ವಿಕ ಅನುಸಂಧಾನ ನಡೆಸಲಾಗಿದೆ. ಅವುಗಳಲ್ಲಿ ಬಿಂಬದೊಳಗಣ ಪ್ರಾಣ – ದಲಿತತತ್ವ ಮನುಷ್ಯನ ದೇಹದೊಳಗಿನ ಆತ್ಮಕ್ಕೆ ಯಾವುದೇ ಬೇಧವಿಲ್ಲ, ಈ ಆತ್ಮದ ಸುತ್ತವಿರುವ ಎಲುಬು. ಮೌಂಸ ಜೊತೆಗೆ, ಮನಸ್ಥಾಪ, ಅಸೂಯೆಯ. ಸ್ವಾರ್ಥದ ಭವಗಳು ಸೇರಿ ಇತರರನ್ನು ಶೋಷಣೆ ಮಾಡುವದು ನಡೆಯುತ್ತದೆ ಎಂಬ ಆಶಯದ ಹಿನ್ನಲೆಯಲ್ಲೂ, ಕಾಳಿಂಗರಾಯನ ಕಾವ್ಯದಲ್ಲಿ ಬರುವ ಕಾಳಿಂಗನ ಮಡದಿ ಚೆನ್ನವ್ವನ ಪಾತ್ರದ ಹಿನ್ನಲೆಯಲ್ಲಿ ಜಾನಪದ ಸಂಸ್ಕೃತಿಯಲ್ಲಿ ಹೆಣ್ಣಿನ ಶೋಚನೀಯ ಸ್ಥಿತಿಯನ್ನು ದರ್ಶಿಸಲಾಗಿದೆ. ಹಾಗೂ ಅವರ ಸಂಪ್ರದಾಯದ ಆಡಂಬರವನ್ನು ಕೊಡವರ ಮದುವೆ ಹಾಗೂ ನಿಸರ್ಗದಲ್ಲಿ ಕಾವೇರಿಯಿಂದ ರೂಪಿತವಾದ ರಮಣೀಯ ತಾಣಗಳ ಕುರಿತಾದ ಉಲ್ಲೇಖವನ್ನಿಲ್ಲಿ ನೀಡಲಾಗಿದೆ.

೪ ನೇ ಹಂತದಲ್ಲಿ ಜಾನಪದ ಕ್ಷೇತ್ರದಲ್ಲಿ ಸೃಜನಶೀಲ ಬರಹಗಾರರಾಗಿ ಗುರುತಿಸಿಕೊಂಡಿರುವ ಅವರ ಪ್ರತಿಭೆಯಿಂದ ಅರಳಿದ ಲೇಖನ ಕುಸುಮಗಳ ಸುಗಂಧವನ್ನ ಹರಡಲಾಗಿದೆ. ಒಬ್ಬ ಸೃಜನಶೀಲ ಬರಹಗಾರನಿಗೆ ಇರಬೇಕಾದ ಲಕ್ಷಣಗಳೆಲ್ಲ ಹೆಬ್ಬಾಲೆಯವರಲ್ಲಿದೆ ಅದನ್ನು ಹೇಗೆ ಬೇರೆ ಬೇರೆ ಲೇಖನದಲ್ಲಿ ವಿಭಿನ್ನವಾಗಿ ವಿಶಿಷ್ಟವಾಗಿ ಅಭಿವ್ಯಕ್ತಿಸಿದ್ದಾರೆ. ಪ್ರಮುಖವಾಗಿ ಹಳ್ಳಿ ಸೊಗಡಿನ ವಾಸನೆಯನ್ನು ಬೀರುವ ಮಣ್ಣಿನ ಮಗಳಾದ ಅರಳವ್ವನಲ್ಲಿನ ಭಾಷೆ, ತಂತ್ರ, ಶೈಲಿ, ಕುಲಕಸುಬು, ಹಬ್ಬ–ಹರಿದಿನಗಳು ಜಾತ್ರೆಗಳನ್ನು ಸಂಪ್ರದಾಯ, ಆಚರಣೆ ಮೂಢನಂಬಿಕೆ, ಸಾಮಾಜಿಕ ಬಾಂಧವ್ಯಗಳ ಬಗೆಗೆ ನೀಡಿದ ಗಮನ ಹೆಚ್ಚು ವಿಶಿಷ್ಟವು ಅದ್ಭುತವು ಆಗಿರುವುದು ಅಲ್ಲದೆ ಹಲಕಟ್ಟ ಸಿದ್ಧನ ಅವಾಂತರಗಳು ಅಂಬಲಿ ಸಮಾಧಿ ಬಾಡಿಗೆ ದೇವರು ಲೇಖನಗಳಲ್ಲಿನ ಸರಳತೆ, ಸೃಜನತೆ ಹಾಗೂ ಸೈಧಾಂತಿಕ ಹಿನ್ನಲೆಯಲ್ಲಿ ಬಂದ ರೀತಿಯನ್ನು ಇಲ್ಲಿ ಎಳೆ ಎಳೆಯಾಗಿ ನೋಡುವ ಪ್ರಯತ್ನ ಸಾಗಿದೆ.

ಹೇಗೆ ಒಂದು ಪದ್ಯದಲ್ಲಿ ಬರುವ ಪಲ್ಲವಿ ಪದ್ಯ ಹೇಳುವ ಮುಂಚಿನ ಪೀಠಿಕೆಯಾಗಿರುತ್ತದೆಯೋ ಹಾಗೆ ಇಲ್ಲಿ ಅಧ್ಯಯನ ಉದೇಶ ಮತ್ತು ಸ್ವರೂಪ ಅಡಿಯಲ್ಲಿ ಹೇಳಿ ಮುಂದೆ ಸಾಗುತ್ತಾ ಅನುಪಲ್ಲವಿಯಲ್ಲಿ ಭಾವನೆಯ ಹರಿವು ಇರುವುದೋ ಹಾಗೆ ಮಧ್ಯಂತರದಲ್ಲಿ ಹಾಗು ಕೇಂದ್ರ ಬಿಂದುವಾದ ವಿಷಯದ ಬಗ್ಗೆ ಪರಿಪೂರ್ಣವಾಗಿಯಲ್ಲದಿದ್ದರು ಅಳಿಲು ಸೇವೆಯಷ್ಟಾದರೂ ಸೇವೆ ಪ್ರಜ್ಞಾಪೂರ್ವಕವಾಗಿ ಅವರ ಬದುಕ ಬರಹದ ಬಗ್ಗೆ ವಿವರಣೆಯನ್ನ ನೀಡಿ ಅವುಗಳ ಬಗ್ಗೆ ಚರ್ಚೆಯನ್ನು ಮಂಡಿಸಿದ್ದೇನೆ. ಇನ್ನು ಉಳಿದಿರುವುದೇ ಮುಡಿ ಇದನ್ನು ಅವರ ಸಾಹಿತ್ಯಿಕ ಸಾಮಾಜಿಕ ಕಾರ್ಯಗಳಲ್ಲಿನ ಪಾತ್ರ ಅವರ ಕಾರ್ಯಚಟುವಟಿಕೆ ಸೌಹಾರ್ದ ಬಾಂಧವ್ಯ ಇವುಗಳಿಗೆ ಸಾಕ್ಷಿಯಗಿ ನಿಲ್ಲುವ ಭಾವಚಿತ್ರಗಳನ್ನು ನನ್ನ ಈ ಪ್ರಬಂಧ ಪರಿಪೂರ್ಣತೆಯಲ್ಲಿ ಪೂರಕ ಪ್ರೇರಕವಾಗಿರುವ, ಗ್ರಂಥಗಳನ್ನು ಹೇಳುವುದರ ಜೊತೆಗೆ ಉಪಸಂಹಾರವನ್ನು ನೀಡಲಾಗಿದೆ.

ಈ ಕುರಿತು ಸಮರ್ಪಕ ಅಧ್ಯಯನ ಮುಂದಿನ ಅಧ್ಯಯಗಳಲ್ಲಿ ಸಾಗಿರುವುದು ನೀವು ಕಾಣಬಹುದು.

# ಅಧ್ಯಾಯ-೨

## ಡಾ. ಹೆಬ್ಬಾಲೆ ಕೆ. ನಾಗೇಶ ಅವರು ಬದುಕು ಮತ್ತು ಬರಹ.

ಅ) ಸಾಮಾಜಿಕ ಬದುಕು.

ಆ) ಸಾಂಸ್ಕೃತಿಕ ಬಿಕ್ಕಟ್ಟು.

ಇ) ಪಡೆದ ಪ್ರಶಸ್ತಿಗಳು.

# ಅಧ್ಯಾಯ –2

## ಡಾ. ಹೆಬ್ಬಾಲೆ ಕೆ. ನಾಗೇಶ ರವರ ಬದುಕು ಮತ್ತು ಬರಹ

ಕರ್ನಾಟಕದ ಜೀವನದಿಗೆ ಜನ್ಮ ನೀಡಿದ ಸ್ವರ್ಗದ ಪ್ರತಿರೂಪವಾಗಿರುವ ನಿಸರ್ಗದ ರಮಣಿಯ ತಾಣಾವಾಗಿರುವ ವೀರಧೀರರಿಗೆ ಜನ್ಮ ನೀಡಿದ ಗಂಡು ಭೂಮಿ. ಕುವೆಂಪು ಸಾಹಿತ್ಯದಲ್ಲಿ ಕುಣಿದಾಡುವ ಮಲೆನಾಡು ಕರ್ನಾಟಕದ ಕೊಡುಗ ಜಿಲ್ಲೆ ಇಲ್ಲಿಯ ಸೋಮುವಾರ ಪೇಟೆ ತಾಲೂಕಿನ ಹೆಬ್ಬಾಳೆಯಲ್ಲಿ ಮುತ್ತಮ್ಮ ಮತ್ತು ಕೆಂಚಯ್ಯಾ ದಂಪತಿಗಳಿಗೆ ಹಿರಿಯ ಮಗನಾಗಿ ಜನಿಸಿದ ಹೆಬ್ಬಾಳೆಯವರು ಬಡತನ, ಅನಕ್ಷರತೆ, ಜಾತಿ ಭೇದ ಇದನ್ನೆ ತಮ್ಮ ಸುತ್ತಲೂ ಕಂಡು ಅದನ್ನೆ ಅನುಭವಿಸಿ ಬೆಳೆದ ಅವರ ಮನಸ್ಸಿನಲ್ಲಿ ಮಡುಗಟ್ಟಿದ ನೋವು ದುಃಖ ಎಲ್ಲವೂ ಕೃತಿಗಳ ಮುಖಾಂತರ ಹೊರಬಂದಿವೆ.

ಅವುಗಳಲ್ಲಿ ಪ್ರಮುಖವಾಗಿ ಕಾಳಿಂಗರಾಯನ ಕಾವ್ಯ 1998ರಲ್ಲಿ ಕೊಡವರ ಮದುವೆ 2002 ರಲ್ಲಿ ಜಾನಪದ ಬನಸಿರಿ , ಕುಲಕಸುಬುಗಳು 2005 ರಲ್ಲಿ ಕಾವೇರಿ ಜಾನಪದ, ಮಿಂಚುಗೊಂಚಲು (ಕವನ ಸಂಕಲನ) 2006ರಲ್ಲಿ ಬಿಂಬದೊಳಗಿನ ಪ್ರಾಣ ಮತ್ತು ಕರಾಳ ರಾತ್ರಿ , ಅರಳವ್ವ (ಕಾದಂಬರಿಗಳು) ಮಂಟೆಸ್ವಾಮಿ ಮತ್ತು ದಲಿತರು ಇವು ಈಗಾಗಲೇ ಓದುಗರ ಮಡಲಿಗೆ ಬಂದರೆ ಸಮಾಧಿ (ಕಾದಂಬರಿಗಳು) ಅಂಬಲಿ (ಜೀವನಚರಿತ್ರೆ) . ಹಲಕಟ್ಟ ಸಿದ್ದನ ಅವಾಂತರಗಳು ಬತ್ತಲೆ ಕಥೇಯಾದವರು , ಬಾಡಿಗೆ ದೇವರು( ಕಥಾಸಂಕಲನ) ಮುದ್ರಣ ಹಂತದಲ್ಲಿವೆ ಅಲ್ಲದೇ 2004 ರಲ್ಲಿ Glimpeses of Karnataka Folklore ಇಂಥಹ ಅನೇಕ ಕಾದಂಬರಿಗಳು ಹೊರಬಂದಿವೆ. ಇನ್ನೂ ಹಲವು ಕಾದಂಬರಿಗಳ ಹೆಬ್ಬಾಳೆಯವರು ನಿರ್ಮಿಸುತ್ತಿದ್ದಾರೆ.

**ಸಾಮಾಜಿಕ ಬದುಕು**

ಕೊಡುಗ ಜಿಲ್ಲೆ ಸೋಮುವಾರ ಪೇಟೆ ತಾಲೂಕಿನ ಹೆಬ್ಬಾಳೆಯಲ್ಲಿ ದಲಿತರ ಕಂಚಯ್ಯ ಮತ್ತು ಮುತ್ತಮ್ಮ ದಂಪತಿಗಳಿಗೆ ಮೊದಲನೆ ಮಗುವಾಗಿ 15–05–1960 ರಂದು ಜನಿಸಿದರು. ಇವರು 9 ಜನ ಸಹೋದರ ಸಹೋದರಿರನ್ನು ಪಡೆದಿದ್ದಾರೆ. ಒಂದು ದೊಡ್ಡ ಕುಟುಂಬವನ್ನು ಹೊಂದಿದ ಇವರು ಬಡತನ ಒಂದು ಅವಿಭಾಜ್ಯ ಅಂಗವಾಗಿ ಸ್ವೀಕರಿಸಿದರು. ಇಂತಹ ಸ್ಥಿತಿಯಲ್ಲಿ ಸವರ್ಣಿಯರ ಮನೆಯಲ್ಲಿ ಕೂಲಿ ಕೆಲಸ ಮಾಡಬೇಕಾಗಿತ್ತು. ನಂತರ ಅವರ ತಂದೆ–ತಾಯಿ ಹೆಬ್ಬಾಳೆಯಿಂದ ಶನಿವಾರ ಸಂತೆಗೆ ವಲಸೆ ಬಂದರು. ಅಲ್ಲಿ ಡಾ. ನಾಗೇಶರವರು ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣವನ್ನು ಪಡೆದರು. ಮುಂದಿನ ಶಿಕ್ಷಣಕ್ಕಾಗಿ ಮಂಗಳೂರಿಗೆ ಬಂದರು. 1984ರಿಂದ 1986ರಲ್ಲಿ ಮಂಗಳೂರು ವಿಶ್ವವಿದ್ಯಾಲಯದಿಂದ ಅರ್ಥಶಾಸ್ತ್ರದಲ್ಲಿ ಎಮ.ಎ. ಪದವಿಯನ್ನು ಪಡೆದುಕೊಂಡರು. 1986ರಲ್ಲಿ ಕೊಡುಗ ಜಿಲ್ಲೆಯ ಕುಶಲ ನಗರದ ಸರಕಾರಿ ಪ್ರಥಮ ದರ್ಜೆ ಕಾಲೇಜಿನಲ್ಲಿ ಉಪನ್ಯಾಸಕರಾಗಿ ಹುದ್ದೆಗೆ ಸೇರಿಕೊಂಡರು. 1987 ರಲ್ಲಿ

ಚೆನ್ನಾಂಬಿಕಾ ಪ್ರಥಮ ದರ್ಜೆ ಕಾಲೇಜು ಸಾಲಿಗ್ರಾಮ ಹಾಸನದಲ್ಲಿ ಒಂದು ವರ್ಷ ಸೇವೆಯನ್ನು 1989-90 ರ ಸಾಲಿನಲ್ಲಿ ಕೃಷ್ಣ ಪ್ರಥಮ ದರ್ಜೆ ಕಾಲೇಜು ಹಾಸನ ಇಲ್ಲ ಸೇವೆಯನ್ನು ಸಲ್ಲಿಸಿದ್ದರು. ಈ 3 ವರ್ಷ ಸೇವೆ ಸಲ್ಲಿಸುತ್ತಲೆ. ಮೈಸೂರು ವಿಶ್ವವಿದ್ಯಾನಿಲಯ ಮೈಸೂರಿನಲ್ಲಿ L.L.B ಪದವಿಯನ್ನು ಪಡೆದರು 1992-94 ಜಾನಪದದಲ್ಲಿ ಎಂ. ಎ. ಪದವಿಯನ್ನು ಅದೇ ಮೈಸೂರು ವಿಶ್ವವಿದ್ಯಾಲಯದಿಂದ ಪಡೆದರು. ಅದರೋಂದಿಗೆ 1993 ರಲ್ಲಿ ಸ್ನಾತಕೋತ್ತರ ಡಿಪ್ಲೋಮಾ ಪದವಿಯನ್ನು (ಭಾರತೀಯ ಸಾಹಿತ್ಯ) 1994 ರಲ್ಲಿ ಭಾಷಾವಿಜ್ಞಾನದಲ್ಲಿ ಸ್ನಾತಕೋತ್ತರ ಡಿಪ್ಲೋಮಾವನ್ನು 1995 ರಲ್ಲಿ ಜೈನಾಲಜಿ ವಿಷಯದಲ್ಲಿ ಸ್ನಾತಕೋತ್ತರ ಡಿಪ್ಲೋಮಾ ಪದವಿಯನ್ನು ಪಡೆದರು ಇವರ ಡಿಗ್ರಿಗಳ ಸರಣಿಯನ್ನು ನೋಡಿದರೆ ಯಾರು ಕೂಡ ಬೆರಗಾಗವಂತಹದು ಒಂದು ವಿಷಯದಲ್ಲೆ 10 ಸಾರಿ ಫೇಲಾಗುವ ಮಕ್ಕಳು ಇರುವಾಗ ಇವರ ಜ್ಞಾನದಾಹ ವಿಸ್ಮಯ ಭರಿಸುವಂತಹುದು. ಈ ಎಲ್ಲದರ ಜ್ಞಾನ ಪಡೆದರು ಸಂಶೋಧನಾ ಕ್ಷೇತ್ರದಲ್ಲಿ ಸಾಹಿತ್ಯ ಕೃಷಿ ಲೋಕಕಾಗಿ ಜಾನಪದವನ್ನು ಆರಿಸಿಕೊಂಡರು 1994-97 ರವರಗೆ ಸಂಶೋಧನಾ ಪ್ರಬಂಧ ಮಂಡಿಸಿ ಮೈಸೂರು ವಿಶ್ವವಿದ್ಯಾಲಯದಿಂದ ಗೌರವ ಡಾಕ್ಟರೇಟನ್ನು ಪಡೆದುಕೊಂಡಿದ್ದಾರೆ.

1997 ರಿಂದ ಹಂಪಿಯ ಕನ್ನಡ ವಿಶ್ವವಿದ್ಯಾಲಯದಲ್ಲಿ ಸಂಶೋಧಕರಾಗಿ ಅಧ್ಯಾಪಕರಾಗಿ ತೊಡಗಿಸಿಕೊಂಡಿದ್ದಾರೆ ಕನ್ನಡ ವಿಶ್ವವಿದ್ಯಾಲಯದ ಜಾನಪದ ವಿಭಾಗದ HOD ಯಾಗಿಯು ನಿಯುಕ್ತರಾಗಿದ್ದಾರೆ.

ಇವರ ಮಾರ್ಗದರ್ಶನದಲ್ಲಿ 2002 ರಲ್ಲಿ ಬಳ್ಳಾರಿ ಜಿಲ್ಲೆಯಲ್ಲಿ ತೊಗಲು ಗೊಂಬೆಯಾಟ, ಉಜ್ಜಯಿ ಗ್ರಾಮಾಧ್ಯಯನ 2003 ರಲ್ಲಿ ಮುದಿಮಲ್ಲಪ್ಪನ ಜೀವನ ಮತ್ತು ಸಾಧನೆ, 2004 ರಲ್ಲಿ ಸಂಡೂರ ಪರಿಸರದ ಗ್ರಾಮ ದೈವಗಳ ಒಂದು ಅಧ್ಯಯನ ಎನನುವ ಎಂ. ಫಿಲ್ ನಿಬಂಧಗಳು. ಜೋಕುಮಾರ ಸ್ವಾಮಿ, ಅಭಿವೃದ್ಧಿ ಯೋಜನೆ ಅಡಿಯಲ್ಲಿ ದಲಿತರ ಸ್ಥಿತ್ಯಂತರಗಳು, ಧರ್ಮ ಸಹಿಷ್ಣು ಶ್ರದ್ಧಾಕೇಂದ್ರಗಳ ತಾತ್ವಿಕ ನೆಲೆಗಳು ಹಾಗೂ ಪರಂಪರೆಯ ಒಂದು ಅಧ್ಯಯನ. ಬಳ್ಳಾರಿ ಜಿಲ್ಲೆಯ ಘಾಣಿಗೆರ ಕುರಿತಾದ ಒಂದು ಅಧ್ಯಯನ , ಕನ್ನಡ ಜಾನಪದ ತಾತ್ವಿಕ ನೆಲೆಗಳು ಹಾಗೂ ಡೋಳ್ಳು ಹಾಡುಗಳ ಸಂಸ್ಕೃತಿಕ ಅಧ್ಯಯನ ಎನ್ನುವಂತಹ ಪಿ.ಹೆಚ್‌ಡಿ ಪ್ರಬಂಧಗಳು ಹೊರಬಂದಿವೆ. ಅಲ್ಲದೇ ಇವರೆ ಅನೇಕ ಸಂಶೋಧನ ಪ್ರಬಂಧಗಳನ್ನು ಮಂಡಿಸಿದ್ಧಾರೆ ಅವುಗಳನ್ನು ಈ ಕೆಳಗಿನಂತೆ ಕಾಣಬಹುದಾಗಿದೆ.

1) 1995 ರಲ್ಲಿ ಶಕ್ತಿ ದಿನಪತ್ರಿಕೆಯಲ್ಲಿ ಕೊಡಗಿನ ಸಂಸ್ಕೃತಿ ಎನ್ನುವ ಲೇಖನವನ್ನು
2) 1996 ರಲ್ಲಿ ಕನ್ನಡ ಪ್ರಭ ದಿನ ಪತ್ರಿಕೆಯಲ್ಲಿ ಎಲ್ಲಿಭೂರಮೆ ದೇವ ಸನ್ನೀಧಿ ಬಯಸಿ ಬಿಮ್ಮನೆ ಬಂದಳೋ ಎನ್ನುವ ಲೇಖನ್ನವನ್ನು.

3) ಉತ್ತರ ಅಮೇರಿಕದ ಜನಪದ ದೈವಗಳು, ಮುಕ್ತ ಸಂಸ್ಕೃತಿಯ ಹೋಳವಿನ ಕೃತಿ ಪಟ್ಟೋಲೆ ಪಳಮೆ, ಕೊಂಬಾಟ್, ನರಿಮಂಗಲದ ಕುರಿತಾದ ಲೇಖನಗಳನ್ನು ಜನಪದ ಕರ್ನಾಟಕ ಷಣ್ಮಾಸಿಕ ಕನ್ನಡ ವಿಶ್ವವಿದ್ಯಾಲಯ ಹಂಪಿಯಲ್ಲು ಚಿತ್ರದುರ್ಗ ಮತ್ತು ಸಂಕದಲ್ಲಿ ನಡೆದ ದೇಶಿ ಸಮ್ಮೇಳನದಲ್ಲಿ ಸಾವಳಗಿ ಶಿವಲಿಂಗೇಶ್ವರ ಹಾಗೂ ಕಂಸಾಳಯ ಕುರಿತ ಲೇಖನವನ್ನು ಹಾಗೂ ಜಾನಪದ ಮತ್ತು ಆಧುನಿಕತೆ ಸಮಕಾಲಿನತೆ ಮತ್ತು ಅಲೇಮಾರಿಗಳು, ಸುಗ್ಗಿ ಎನ್ನುವಂತಹ ಇತರ ಪ್ರಬಂಧಗಳನ್ನು ಮಂಡಿಸಿದ್ದಾರೆ.

ಹೀಗೆ ಹತ್ತು ಹಲವು ಸಂಶೋಧನ ಲೇಖನಗಳನ್ನು, ಪ್ರಬಂಧಗಳನ್ನು ಇವರು ಹಲವಾರು ಕ್ಷೇತ್ರದಲ್ಲಿ ಮಂಡಿಸುತ್ತ ಬಂದಿದ್ದಾರೆ.

**ಅವರು ಗುರುತಿಸಿಕೊಂಡ ಸಾಮಾಜಿಕ ಕ್ಷೇತ್ರಗಳು**

ಕನ್ನಡ ವಿಶ್ವವಿದ್ಯಾಲಯ ಹಂಪಿಯ ಜಾನಪದ ಅಧ್ಯಯನದ ವಿಭಾಗದ ಅಧ್ಯಯನ ಮಂಡಳಿ ಹಾಗೂ ಪರೀಕ್ಷಾ ಮಂಡಳಿ ಮೈಸೂರಿನ ದೇಶಿ ಟ್ರಸ್ಟ್, ಕೇರಳದ ಫೋಕ್ ಫಾಜಿಲ್ಸನಲ್ಲೂ ಕಾರ್ಯನಿರ್ವಹಿಸಿದ್ದಾರೆ. 2004 ರಲ್ಲಿ ಅಮೇರಿಕನ ರಿಸರ್ಚ ಅಡವೈಜಿಂಗ್ ಕಮಿಟಿಯ, ದ ಅಮೇರಿಕನ್ ಬಯೋಗ್ರಾಫಿಕಲ್ ಇನ್ಸಟ್ಯಟ್ ರಿಸರ್ಚ ಬೋರ್ಡ ಆಫ್ ಅಡವೈಜರ್ಸ ಕಮಿಟಿಯ ಮತ್ತು ಕೇರಳದ ಫೋಕ ಫಾಜಿಲ್ಸ ಲೈಫ ಮೆಂಬರ ಆಗಿದ್ದರು. ಅಲ್ಲದೇ 2004 ರಿಂದ 2006ರ ವರೆಗೆ ಕನ್ನಡ ವಿಶ್ವ ವಿದ್ಯಾಲಯದ ಪರಿಶಿಷ್ಪ ಜಾತಿ ಮತ್ತು ವರ್ಗಗಳ ಸ್ಥಾಯಿ ಸಮಿತಿಯ ಸದಸ್ಯರು , ಕರ್ನಾಟಕ ಇತಿಹಾಸ ಕಾಂಗ್ರೆಸನ ವೇದಿಕೆ ಮತ್ತು ಅತಿಥಿಗಳ ಸಮಿತಿಯ ಅಧ್ಯಕ್ಷರಾಗಿದ್ದರು. ಕನ್ನಡ ವಿಶ್ವವಿದ್ಯಾಲಯ ಘಟಿಕೋತ್ಸವ ಸಮಿತಿಯ ಸದಸ್ಯರಾಗಿಯು ಕಾರ್ಯವನ್ನು ನಿರ್ವಹಿಸಿದ್ದಾರೆ. 2002 ಮತ್ತು 2004 ರಲ್ಲಿ ಕನ್ನಡ ವಿಶ್ವವಿದ್ಯಾಲಯವು ಒಮ್ಮೆ ಕನ್ನಡ ಜಾನಪದ ಸಾಹಿತ್ಯದ ಬಗ್ಗೆ ಇನ್ನೊಮ್ಮೆ ಪ್ರಾಚೀನ ಮತ್ತು ಪುರಾತತ್ವ ವಿಭಾಗವು ಹಮ್ಮಿಕೊಳ್ಳಲಾದ ಪುನರ್ ಮನನ ಶಿಬಿರದಲ್ಲಿ ಭಾಗವಹಿಸಿ ಕಾರ್ಯವನ್ನು ಮಾಡಿದ್ದಾರೆ. ಅನೇಕ ಕಾರ್ಯಗಳ ಮುಖ್ಯಸ್ಥರಾಗಿ ಈಡಿ ಜವಾಬ್ದಾರಿಯನ್ನಾಗಿ ಯಶಸ್ವಿಯಾಗಿ ನೇರವೇರಿಸಿದ್ದಾರೆ. ಜಾನಪದ ಅಧ್ಯಯನದ ಮುಖ್ಯಸ್ಥರಾಗಿದ್ದಾಗ ಕುಲಕಸುಬುಗಳು ಒಂದು ವಿಶ್ಲೇಷಣೆ , ಜಾನಪದ ಸಂಶೋಧನೆ-ಮುಂದಿನ ಹೆಜ್ಜೆಗಳ ಎಂಬ ಅಂಶದ ಮೇಲೆ ಸಂವಾದ ಗೋಷ್ಠಿಯನ್ನು ನಡೆಸಿದರು. ಅನೇಕ ಕಡೆ ಅನೇಕ ಬಾರಿ ಸಂಗೀತ ಮತ್ತು ನೃತ್ಯ ಕಾರ್ಯಕ್ರಮಗಳನ್ನು ನಡೆಸಿದ್ದರು.

ರಾಷ್ಟ್ರೀಯ ಮಟ್ಟದ ಸಮಾವೇಶಗಳಾದ 2004 ರಲ್ಲಿ ಫಾಜಿಲ್ಸ ಮತ್ತು ಕನ್ನಡ ವಿಶ್ವವಿದ್ಯಾಲಯ ಹಂಪಿಯ ನೇತ್ರತ್ವದಲ್ಲಿ ಆಯೋಜಿಸಿದ್ದ ಅಖಿಲ ಭಾರತ 11ನೇ ವಾರ್ಷಿಕ ಸಮಾವೇಶದಲ್ಲಿ, ದೇಶಿ ಟ್ರಸ್ಟಿನ್ ಕೇಂದ್ರ ಭಾರತೀಯ ಭಾಷಾ ಕೇಂದ್ರದ ಮೈಸುರು ಮತ್ತು ಅಂತರ ರಾಜ್ಯ ಮಟ್ಟದ ಸಮಾವೇಶದಲ್ಲು ಭಾಗಿಯಾಗಿ ಪ್ರಬಂಧವನ್ನು ಮಂಡಿಸಿದ್ದಾರೆ.

ಇನ್ನೂ ಗಂಗಾವತಿಯಲ್ಲಿ ಕನ್ನಡ ವಿಶ್ವವಿದ್ಯಾಲಯ ಹಂಪಿ ಮತ್ತು ಚನ್ನಬಸವೇಶ್ವರ ಸಹಕಾರ ಸಂಘದ ಆಶ್ರಯದಲ್ಲಿ ನಡೆದ ರಾಜ್ಯ ಮಟ್ಟದ ದೇಶಿ ಸಮ್ಮೇಳನದಲ್ಲಿ ಭಾಗಿಯಾಗಿ ಮಾಟಾ ಮಂತ್ರ ಮತ್ತು ಆಚರಣೆ ಎಂಬ ಮಂಡಿಸಿದ್ದರಲ್ಲದೆ ಇದೇ ರೀತಿ ಹತ್ತು ಹಲವು ರಾಜ್ಯ ಮಟ್ಟದಲ್ಲಿ ನಡೆದ ದೇಶಿ ಸಮ್ಮೇಳನದಲ್ಲಿ ಭಾಗಿಯಾಗಿ ವಿವಿಧ ವಿಷಯಗಳ ಬಗ್ಗೆ ತಮ್ಮ ವಾದ ಮಂಡಿಸಿ ಯಶಸ್ವಿಯಾಗಿದ್ದಾರೆ. ಹೀಗೆ ಒಂದಲ್ಲ ಎರಡಲ್ಲ ಅನೇಕ ಬೇರೆ ಬೇರೆ ಕ್ಷೇತ್ರಗಳಲ್ಲಿ ವಿಭಿನ್ನ ರೀತಿಯಿಂದ ತಮ್ಮನ್ನು ತಾವು ಗುರುತಿಸಿಕೊಂಡಿದ್ದಾರೆ. ಇದಕ್ಕೆ ಕಾರಣ ಅವರು ಕಳೆದುಕೊಂಡಿರುವ ಜ್ಞಾನ ಅವರು ಪಡೆದಿರುವುದು ಒಂದೇ ದಾರಿಯ ಜ್ಞಾನವಲ್ಲ ಅದು ಬೇರೆ ಬೇರೆ ಹೊಳಹುಗಳನ್ನು ದರ್ಶಿಸುವುದಾಗಿದೆ. ಜ್ಞಾನದಿಂದ ಮಾತ್ರವಲ್ಲದೇ ಅವರು ತಮ್ಮ ಜೀವನದಲ್ಲಿ ಪಡೆದುಕೊಂಡಿರುವ ಅನುಭವಗಳನ್ನು ಇತರ ಕ್ಷೇತ್ರಗಳಲ್ಲಿ ದುಡಿಯುವಂತೆ ಪುಷ್ಟಿ ನೀಡಿದೆ.

ಅಂತು ಕೌಟಂಬಿಕ ಹಿನ್ನಲೆಯಿಂದ ಸಾಕಷ್ಟು ನೋವು, ಕಷ್ಟಗಳನ್ನೆ ಅನುಭವಿಸಿಕೊಂಡು ಬಂದಿದ ಹೆಬ್ಬಾಲೆಯವರು ಇನ್ನೂ ಸಮಾಜದಲ್ಲೊಂದು ಪ್ರತಿಷ್ಠೆಯ ಸ್ಥಾನ ಪಡೆದಿದ್ದಾರೆ. ವೈವಾಹಿಕ ಜೀವನದಲ್ಲಿ ದಾಕ್ಷಾಯಿಣಿಯವರನ್ನು ಸಂಗಾತಿಯನ್ನಾಗಿ ಪಡೆದುಕೊಂಡು ರುಚಿರ ಎಂಬ ಮಗಳನ್ನು ತಮ್ಮ ಕುಟುಂಬದ ಸದಸ್ಯರಾಗಿ ಪಡೆದಿದ್ದಾರೆ. ನೆಮ್ಮದಿಯ ಸುಖ-ಸಂತೋಷದ ಜೀವನವನ್ನು ತಮ್ಮದಾಗಿಸಿಕೊಂಡು ಸಮಾಜದಲ್ಲಿ ಶೋಷಣೆಗೆ ಒಳಗಾಗುತ್ತಿರುವವರು ಸ್ವತಂತ್ರವಾಗಿ ನೆಮ್ಮದಿಯಿಂದ ಬದುಕು ನಡೆಸಬೇಕೆಂಬ ಆಶೆಯದಿಂದ ದಲಿತರ ಪರವಾಗಿ ಹೋರಾಟವನ್ನು ನಡೆಸುತ್ತಿದ್ದಾರೆ. ಇವರ ಬದುಕು "ಬಾಳ್ವೆ ಸ್ವೀಕಾರಕ್ಕಿದೆ ನಿರಾಕರಣೆಗೆ ಅಲ್ಲ - ಶಿವರಾಮಕಾರಂತ" ಎಂಬ ಅಂಶಕ್ಕೆ ಇನ್ನೂ ಪುಷ್ಟಿ ಕೊಡುವಂತಹದು. ಅವರ ಬದುಕು ಮಣ್ಣಿನಲ್ಲಿ ಹುದಗಿದ್ದ ಇತರ ಪ್ರತಿಭಾ ವಜ್ರಗಳಿಗೆಲ್ಲ ದಾರಿ ದೀಪವಾಗಲಿ ಎನ್ನುವ ಆಶೆಯನ್ನೆ ನಾನು ಈ ನಿಬಂಧದ ಮುಖಾಂತರ ವ್ಯಕ್ತಪಡಿಸಿದ್ದೇನೆ. ನಿಜಕ್ಕೂ ಒಬ್ಬ ವ್ಯಕ್ತಿ ಇನ್ನೊಬ್ಬರ ಕಷ್ಟ ಸಮಸ್ಯೆಗಳನ್ನು ಅರ್ಥಮಾಡಿಕೊಂಡು ಅವರ ಪರವಾಗಿ ಹೋರಾಡಬೇಕಾದರೆ ಅಂತಹ ಅನುಭವಗಳು ಅವನ ಜೀವನದಲ್ಲಿ ಆದಾಗಲೇ ಮಾತ್ರ ಎಂಬುದನ್ನು ಡಾ. ನಾಗೇಶರವರು ಮನೆತನದ ಹಿನ್ನಲೆ ಮತ್ತು ಅವರ ಸಾಮಾಜಿಕ ಕ್ಷೇತ್ರದಲ್ಲಿನ ಕಾರ್ಯಗಳನ್ನು ತರ್ಕಿಸಿದಾಗಲೇ ಮನದಟ್ಟಗುತ್ತದೆ. ಅಲ್ಲದೇ ಇವರಲ್ಲಿ ಜ್ಞಾನ ಕೌಶಲ್ಯದೊಂದಿಗೆ ಸಮರ್ಪಣ ಮನೋಭಾವವು ಮಿಳತಗೊಂಡಿದೆ. ಅದರಿಂದಲೇ ಸ್ವ-ಪ್ರಯತ್ನದಿಂದ , ಪ್ರತಿಭೆಯಿಂದ ಬೆಳೆದು ಬಂದ ಇವರು ಇತರರನ್ನು ಕೈ ಹಿಡಿದು ನಡೆಸಲು ಮುಂದಾಗಿದ್ದಾರೆ. ಈ ಕಾರ್ಯವನ್ನು ಸಾಹಿತ್ಯ ಮತ್ತು ಸಾಮಾಜಿಕ ಕ್ಷೇತ್ರಗಳಲ್ಲಿ ನಿಂತು ಮಾಡುತ್ತಿದ್ದಾರೆ.

**ಸಾಂಸ್ಕೃತಿಕ ಬಿಕ್ಕಟ್ಟುಗಳು:**

ನಮ್ಮ ಸಮಾಜದಲ್ಲಿ ಅದರಲ್ಲೂ ಗ್ರಾಮೀಣ ಪ್ರದೇಶದಲ್ಲಿ ಜಾತಿ ವ್ಯವಸ್ಥೆಯ ಕರಾಳ ಛಾಯ ಎಷ್ಟರ ಮಟ್ಟಿಗೆ ಇತ್ತೆಂದರೆ ಸಾರ್ವಜನಿಕ ಸ್ಥಳಗಳಾದ ಕೆರೆ,ಬಾವಿ, ಹೋಟಲಗಳು , ಮಂದಿರಗಳು ಇಲ್ಲೆಲ್ಲೂ ಕೆಳವರ್ಗದವರು ಸುಳಿಯುವಂತಿರಲಿಲ್ಲ. ಅದಕ್ಕಾಗಿ ದಲಿತರ ಮನೆಯಲ್ಲಿ ಜನಿಸಿದರೆಂಬ ಕಾರಣಕ್ಕೆ ಹೆಬ್ಬಾಲೆರವರನ್ನು ಎಷ್ಟೋಸಾರಿ ದೇವಸ್ಥಾನಗಳಿಗೆ ಹೋಗುವುದನ್ನು ತಡೆಯಲಾಗಿತ್ತು. ಇತರ ಸವರ್ಣಿಯರಂತೆ ಅವರು ಹಬ್ಬ ಹರಿದಿನಗಳ ಸಂದರ್ಭದಲ್ಲಿ ದೇವಸ್ಥಾನಕ್ಕೆ ಹೋಗಿ ಪೂಜೆ ಪುನಸ್ಕಾರ ಅಭೀಷೇಕಗಳನ್ನು ಮಾಡಿಸುವಂತಿರಲಿಲ್ಲ. ಈ ನೋವು ಅವರಿಗೆ ಎಷ್ಟೋ ಸಾರಿ ಕಾಡುತ್ತಲೆ ಇತ್ತು. ಆದರೆ ಸವರ್ಣಿಯರ ದಬ್ಬಾಳಿಕೆಯಿಂದ ಯಾವುದೇ ಧಾರ್ಮಿಕ ಸಾಂಸ್ಕೃತಿಕ ಕಾರ್ಯಗಳಲ್ಲಿ ಇವರು ಭಾಗಿಯಾಗುವಂತಿರಲಿಲ್ಲ.

**ಸಾಧನೆಗೆ ಸಿಕ್ಕ ಪುರಸ್ಕಾರಗಳು**

ಡಾ.ಹೆಬ್ಬಾಲೆಯವರು ಅತಿ ಬಡತನದಿಂದ ಕೆಳವರ್ಗದವರೆಂಬ ಹಣೆ ಪಟ್ಟಿ ಹೊಂದಿ ಹುಟ್ಟಿ ಬೆಳೆದು ಬಂದವರು ಆದರೇ ಜೀವನದ ಉದ್ದಕ್ಕೂ ಯಾವುದೇ ಸಮಸ್ಯೆಗೂ ಎದೆ ಗುಂದದೆ ಅಡ್ಡಿ ಆಂತಕಗಳನ್ನೆಲ್ಲ ಸ್ಪೋಟಿವ್ ಆಗಿ ತೆಗೆದುಕೊಂಡು ನೋಡಿದವರು ಬೇರೆಗಾಗುವಂತೆ ಅಧ್ಯಯನ ಮಾಡಿ ಸಾಹಿತ್ಯ ಕ್ಷೇತ್ರದಲ್ಲೂ ಸಾಮಾಜಿಕ ಸನ್ನೀವೇಶದಲ್ಲು ವಿಶಿಷ್ಟವಾದ ಕಾರ್ಯವನ್ನು ಮಾಡಿದ ಅವರಿಗೆ ಹಲವು ಪುರಸ್ಕಾರ ದೊರೆತ್ತಿವೆ.

1) 2006 ರಲ್ಲಿ ಭಾರತೀಯ ದಲಿತ ಸಾಹಿತ್ಯ ಅಕಾಡೆಮಿ ದೈಹಲಿ ವತಿಯಿಂದ ದಲಿತರ ಪರವಾದ ಹೋರಾಟದ ಸಾಹಿತ್ಯಕ್ಕಾಗಿ ಡಾ.ಅಂಬೇಡ್ಕರ ಫೇಲೋಶಿಪ್ ಸನ್ಮಾನ ಪ್ರಶಸ್ತಿ.

2) ಸಾಹಿತ್ಯ ಕ್ಷೇತ್ರಕ್ಕೆ ಸಲ್ಲಿಸಿದ ಅಪಾರ ಕೊಡುಗೆಗಾಗಿ 2007 ರಲ್ಲಿ ಸ್ನೇಹ–ಸೇತು ಬೆಂಗಳೂರು ಇವರು ಪ್ರಶಂಸ ಪತ್ರ ನೀಡಿ ಗೌರವಿಸಿದ್ದಾರೆ.

3) ಶಿಕ್ಷಣ ಮತ್ತು ಆಡಳಿತ ಕ್ಷೇತ್ರದಲ್ಲಿ ಮಾಡಿದ ಉತ್ತಮ ಸೇವೆಗಾಗಿ ಕಸ್ತೂರಬಾ ಗಾಂಧಿ ಜಯಂತೋತ್ಸವ ಸಮಿತಿ ಬೆಂಗಳೂರು ಇವರು 2007 ರಲ್ಲಿ ವೀರವನಿಕೆ ಕಿತ್ತೂರ ರಾಣಿ ಚನ್ನಮ್ಮ ಸಾಂಸ್ಕೃತಿಕ ಪ್ರತಿಷ್ಠಾನ, ರಾಷ್ಟ್ರೀಯ ಕಸ್ತೂರಬಾ ಗಾಂಧಿ ಸದ್ಭಾವನಾ ಪುರಸ್ಕಾರ ನೀಡಿ ಗೌರವಿಸಿದ್ದಾರೆ.

4) ಸಾಮಾಜಿಕ ಕಾರ್ಯದಲ್ಲಿ ತಮ್ಮನ್ನು ಸಂಪೂರ್ಣವಾಗಿ ತೊಡಗಿಸಿಕೊಂಡು ಈ ಕ್ಷೇತ್ರಕ್ಕೆ ಅತ್ಯುತ್ತಮ ಸೇವೆ ಸಲ್ಲಿಸಿದಕ್ಕಾಗಿ ಪರಿವರ್ತನ (ರಿ) ಸಂಸ್ಥೆ ಬೆಂಗಳೂರು 2007 ರಲ್ಲಿ ರಾಜ್ಯ ಮಟ್ಟದ ಅತ್ಯುತ್ತಮ ಸಮಾಜ ಸೇವಕರ ಪ್ರಶಸ್ತಿ ನೀಡಿದೆ.

5) ಇವರ ಶ್ರೇಷ್ಠವಾದ ಸಾಹಿತ್ಯ ರಚನೆಗಾಗಿ 2007 ರಲ್ಲಿ ಕನ್ನಡ ರಾಜ್ಯೋತ್ಸವದ ಅಂಗವಾಗಿ ಕನ್ನಡ ಹಿತರಕ್ಷಿತರ ಸಂಘ ಕಂಪ್ಲಿ, ಕಂಪಲಿರಾಯ ಪ್ರಶಸ್ತಿ ನೀಡಿ ಸನ್ಮಾನಿಸಿದರು.

ಹೀಗೆ ಕಡಿಮೆ ಅವಧಿಯಲ್ಲೆ ಸಾಹಿತ್ಯ ಕ್ಷೇತ್ರದಲ್ಲೂ ಮತ್ತು ಸಮಾಜದ ಕ್ಷೇತ್ರದಲ್ಲೂ ದಲಿತರ ಪರವಾಗಿ ಮಾಡಿದ ಹೋರಾಟ ಹಾಗೂ ಶ್ರೇಷ್ಠ ಸಾಧನೆಗಾಗಿ ಗೌರವಿಸಲು ಅನೇಕ ಪ್ರಶಸ್ತಿ ಪುರಸ್ಕಾರಗಳನ್ನು ನೀಡಲಾಗಿದೆ. ಇದು ಅವರಿಗೆ ದೊರಕಲೆಬೇಕಾದ ಗೌರವಗಳು ಹೀಗೆ ಇವರು ಇನ್ನೂ ಹೆಚ್ಚು ಹೆಚ್ಚು ಕಾರ್ಯಗಳು, ಸೇವೆಗಳು ಕನ್ನಡ ಸಾಹಿತ್ಯಕ್ಕಾಗಿ ಸಮಾಜದ ಶಾಂತಿ ಸುವ್ಯವಸ್ಥೆಗಾಗಿ ಮಾಡಲಿ ಅವರ ಪ್ರೋತ್ಸಾಹಕ್ಕಾಗಿ ಗೌರವಗಳು ದೊರಕಲಿ ಎಂದು ಆಶಿಸುತ್ತ ಈ ಪ್ರಬಂಧವನ್ನು ಮುಂದುವರಿಸುತ್ತೇನೆ.

# ಅಧ್ಯಾಯ–೩.

## ಡಾ. ಹೆಬ್ಬಾಲೆ.ಕೆ. ನಾಗೇಶರವರ ಕೃತಿಗಳ ತಾತ್ವಿಕ ಅನುಸಂಧಾನ

ಎ. ಕಾಳಿಂಗರಾಯನ ಕಾವ್ಯ ಮತ್ತು ಸ್ತ್ರೀಸಂವೇದನೆ.

ಬಿ. ಬಿಂಬದೊಳಗಣ ಪ್ರಾಣ ಮತ್ತು ದಲಿತತ್ವ

ಸಿ. ಕಾವೇರಿ ಜಾನಪದ ಮತ್ತು ನಿಸರ್ಗ ಕುರುಹುಗಳು

ಡಿ. ಜಾನಪದ ಬನಸಿರಿ –ವಿಭಿನ್ನ ಧಾರೆಗಳ ನೆಲೆಯಲ್ಲಿ

ಇ. ಕೊಡವರ ಮದುವೆ

# ಅಧ್ಯಾಯ–3

## ಡಾ. ಹೆಬ್ಬಾಲೆ. ಕೆ. ನಾಗೇಶ ರವರ ಕೃತಿಗಳು ಮತ್ತು ತಾತ್ವಿಕ ಅನುಸಂಧಾನ

### ಎ) ಕಾಳಿಂಗರಾಯನ ಕಾವ್ಯದಲ್ಲಿ – ಸ್ತ್ರೀ ಸಂವೇದನೆ

ಜನಪದ ನಾಯಕರ ಕುರಿತಾದ ಕಾವ್ಯಗಳನ್ನು ಬರೆಯುವ ಉದ್ದೇಶದಿಂದ ಕಾಳಿಂಗರಾಯನ ಜೀವನ ಕುರಿತಾದ ಈ ಕಾವ್ಯದಲ್ಲಿ ನಾವು ಆಳಕ್ಕೆ ಇಳಿದು ಚರ್ಚೆ ಮಾಡಿದ್ದಾಗ ಅಲ್ಲಿ ಕಾಳಿಂಗರಾಯನಿಗಿಂತಲೂ ಆತನ ತಂದೆ ತಾಯಿಗಳಿಗಿಂತಲೂ ಮನಃಕಲಕುವ ಪಾತ್ರ ಚೆನ್ನಮ್ಮಳದು ಕಾಳಿಂಗರಾಯನ ವರ ಪ್ರಸಾದದಿಂದ ಜನಿಸಿದರಿಂದ ಕಾಳಿಂಗರಾಯನೆಂದೇ ಹೆಸರಿಡಲಾದ ಅರಸುಕುಮಾರ ಜ್ಯೋತಿಷಿಯ ವಾಗ್ದಾನದಂತೆ ಸರ್ಪ / ಸರ್ಪದ ಚಿತ್ರಕಂಡರೆ ಮರಣ ಹೊಂದುತ್ತಾನೆ. ಮದುವೆಯ ವಯಸ್ಸಿಗೆ ಬಂದ ಮಗ ಸತ್ತಾಗ ಹೇಳಲಾರದ ದುಖದಲ್ಲಿ ಲೀನವಾದ ತಂದೆತಾಯಿಗಳು ಸಂಪ್ರದಾಯದಂತೆ ಹೆಣಕ್ಕೆ ಮದುವೆ ಮಾಡಲು ಮುಂದಾಗುತ್ತಾರೆ. ಆದರೆ ಕಳ್ಳಿಗಿಡದೊಂದಿಗೆ ಮದುವೆ ಮಾಡವ ಬದಲು ಜೀವಂತವಾಗ ಹೆಣ್ಣಿನೊಂದಿಗೆ ಮದುವೆ ಮಾಡುವದೆಂದು ನಿಶ್ಚಯಿಸುತ್ತಾರೆ. ಆಗ ಸುತ್ತ ಊರುಗಳೆಲೆಲ್ಲಾ ಡಂಗುರವನ್ನ ಸಾರಿ – ತಮ್ಮ ಮಗನಿಗೆ (ಕಾಳಿಂಗರಾಯನ ಶವಕ್ಕೆ) ಹೆಣ್ಣು ಕೊಟ್ಟವರಿಗೆ ಧನ – ಧಾನ್ಯಗಳನ್ನು ಉಡುಗೊರೆಯಾಗಿ ನೀಡಲಾಗುತ್ತದೆ ಎಂದು ಹೇಳುತ್ತಾರೆ ಆ ಒಂದು ರಾಜ್ಯದ ಜನರು ತಮ್ಮ ಮಗಳು ರಾಜಕುಮಾರನ ಹೆಂಡತಿಯಾಗುತ್ತಾಳೆ, ಅಲ್ಲದೆ ಉಡೊಗೊರೆಯಾಗಿ ತಾವು ಜೀವನವಿಡಿ ಸಂಪಾದಿಸಲಾಗದಷ್ಟು ಸಂಪತ್ತು ಲಭಿಸುತ್ತದೆ. ಆದರೆ ಅದು ರಾಜಕುಮಾರ ಬದುಕಿದ್ದರೆ ಎಲ್ಲವೂ ತಮಗೆ ಒಲಿದ ಅದೃಷ್ಟ ಎನ್ನಬಹುದಿತ್ತು. ಆದರೆ ಆ ಸಂಪತ್ತಿಗಾಗಿ ಹೆಣದೊಂದಿಗೆ ತಮ್ಮ ಮಕ್ಕಳ ಮದುವೆ ಮಾಡುವದೆಂದರೆ ಊಹಿಸಲು ಆಗದ ಆಲೋಚನೆ ಅದಕ್ಕೆ ಯಾರು ತಮ್ಮ ಮಕ್ಕಳನ್ನು ಕೊಡಲು ಮುಂದೆ ಬರಲೇ ಇಲ್ಲ.

ಇಂಥ ಒಂದು ಹೀನಾಯಸ್ಥಿತಿ ದೇವರು ಚೆನ್ನಮ್ಮನಿಗಾಗಿ ಕಾಯ್ದಿರಿಸಿದಂತೆ ಕಾಣುತ್ತದೆ. ಅದಕ್ಕೆ ಎಂಥ ಕಡು ಬಡವರು. ದುರ್ಬಲರು, ಅತಿಯಾಸೆ ಉಳ್ಳವರು, ಕನಿಷ್ಟರು, ಹಾದಿ ಹೋಕರು ಅರಸರ ಈ ಉದ್ದೇಶದ ಈಡೇರಿಕೆಗೆ ಮುಂದೆ ಬರಲಿಲ್ಲ ತಂದೆ ತಾಯಿಯರಿಗೆ ಒಬ್ಬಳೇ ಮಗಳಾಗಿರುವ, ಸುಂದರವೂ, ಸಹನಾಮೂರ್ತಿಯೂ ತಿಳುವಳಿಕೆಯೂಳ್ಳವಳು ಆಗಿರುವ ಚೆನ್ನಮ್ಮಳ ಅಪ್ಪ ಸಂಪತ್ತಿನ ಆಸೆಯಿಂದ ಮಗಳನ್ನು ಹೆಣಕ್ಕೆ ಧಾರೆಯೆರೆದು ಕೊಡಲು ಮುಂದಾಗುತ್ತಾನೆ. ಈ ಒಂದು ಹೇಯ ಕೃತ್ಯ ಮಾಡಬೇಡಿಯೆಂದು ಚೆನ್ನಮ್ಮಾ ಮರುಮಾತಾಡದೆ "ಬಲಿಗೆ ಸಿದ್ಧವಾಗುವ ಕುರಿಯಂತೆ", ಸಿದ್ಧಳಾಗುತ್ತಾಳೆ, ಒಳ್ಳೆ ನಡುವಳಿಕೆ ಇರದ ಸುಂದರವಾಗಿರದವನೊಂದಿಗೆ ಮದುವೆ ಮಾಡಿಕೊಡಲು ಸಿದ್ಧವಿರದ ತಂದೆ – ತಾಯಿಗಳು ಇರುವಾಗ ಜೀವನವನ್ನೆ ಮಾಡಲಾಗದ. ಗಂಡ ಸತ್ತ ಮೇಲೆ ಮಗಳು ವಿಧುವೆಯಾಗುತ್ತಾಳೆ ಆದರೆ

ವಿಧುವೆಯಾಗಿಯೇ (ವಿಧುವೆ ಮಾಡಿಯೇ) ಮಗಳನ್ನು ಧಾರೆಯೆರುವ ಸನ್ನಿವೇಶ ನಿಜಕ್ಕೂ ಹೃದಯವಿದ್ರಾವಕವಾದದ್ದು, ಮಲಮಕ್ಕಳನ್ನು ಇಂಥ ಶಿಕ್ಷೆಗೆ ಗುರಿಮಾಡಲಾಗದು ಮಾನವೀಯತೆ ಇರುವ ಯಾರಾದರೂ ಈ ನಿರ್ಧಾರಕ್ಕೆ ಬರಲಾರರು. ಇಲ್ಲಿ ಸತ್ತ ಮನುಷ್ಯನೊಂದಿಗೆ ಸತ್ತ ಮನಸ್ಸನ್ನು. ಆಸೆಯನ್ನು ಹೊತ್ತು ಅರಸರ ಮನೆಯ ಸೊಸೆಯಾಗಿ ನಡೆಯುತ್ತಾಳೆ.

ಶಾಸ್ತ್ರೋಕ್ತವಾಗಿ, ವಿಧಿಬದ್ಧವಾಗಿ ಕಾಳಿಂಗರಾಯನ ದೇಹಕ್ಕೂ, ಚೆನ್ನಮ್ಮನಿಗೂ ವಿವಾಹ ನಡೆಯುತ್ತದೆ. ತದನಂತರ ಹೆಣವನ್ನು ಅಂತ್ಯ ಸಂಸ್ಕಾರಕ್ಕೆ ಕೊಂಡೊಯ್ಯುವಾಗ ಭಾರಿ ರಭಸದಿಂದ ಮಳೆ ಸುರಿಯುತ್ತಿರಬೇಕಾದರೆ ಆತನ ತಂದೆ – ತಾಯಿ ಸೇರಿ ಈ ಕ್ರಿಯೆಯಲ್ಲಿ ಪಾಲ್ಗೊಂಡ ಎಲ್ಲರು ಅಲ್ಲಿಂದ ಹೊರಟು ಹೋಗುತ್ತಾರೆ. ಯಾವುದೇ ಕಾರಣಕ್ಕೂ. ಯಾವುದೇ ರೀತಿಯಲ್ಲಿ ತಂದೆ – ತಾಯಿ ಯಾರಿಗೆ ಧಾರೆ ಎರೆದರು ತಾಳಿ ಕಟ್ಟಿದ ಕೈಗಳೇ ತನ್ನನ್ನು ಸಾಕಬೇಕಾಗಿದ್ದು. ಅವರೊಂದಿಗೆ · ತಾನು ಬದುಕಬೇಕಾಗಿರುವುದು. ಸಾಯಬೇಕಾದದ್ದು ಅವರೊಂದಿಗೆ "ಕೊಟ್ಟ ಹೆಣ್ಣು ಕುಲಕ್ಕೊರಗೆ" ಎನ್ನುವಂತೆ ಕಷ್ಟ – ಸುಖ ಏನೇ ಬರಲಿ ಮತ್ತೆ ತವರಿಗೆ ಹೋಗಿ ಬಾಳಬಾರದೆಂಬ ಅಂಶವುಳ್ಳ ನಮ್ಮ ಸಂಸ್ಕೃತಿಯ ಮಣ್ಣಿನ ಮಗಳಾದ ಚೆನ್ನಮ್ಮಾ ಇದಕ್ಕೂ ಮೀರಿ ನಿಲ್ಲುತ್ತಾಳೆ. ಹೆಣವನ್ನು ಬಿಟ್ಟು ಕದಡದೆ ನಿಂತು ದೇವರಲ್ಲಿ ಅಚಲವಾದ ನಂಬಿಕೆ ಇಟ್ಟು, ಭಕ್ತಿಯಿಂದ ಪ್ರಾರ್ಥಿಸಿ, ದೇವರನ್ನು ಒಲಿಸಿಕೊಂಡು ತನ್ನ ಮಾಂಗಲ್ಯ ಭಾಗ್ಯವನ್ನು ಉಳುಸಿಕೊಳ್ಳುವಲ್ಲಿ ಸಫಲಳಾಗುತ್ತಾಳೆ.

ಕಾಳಿಂಗರಾಯನಿಗೆ ವರದಿಂದ ಜೀವ ಬರುತ್ತದೆ. ಜೀವ ಬಂದಾಗ ಸುತ್ತಲೂ ಯಾರು ಇರುವುದಿಲ್ಲ ಇದ್ದವಳು ಒಬ್ಬಳೇ ಅಳುತ್ತಾ ಕಂಗಲಾಗಿ ಕುಳಿತಿರುವ ಚೆನ್ನವ್ವ, ಆಕೆಯೊಂದಿಗೆ ಮದುವೆ ಆದಾಗ ಇಹಲೋಕವನ್ನೆ ತ್ಯಜಿಸಿದ ಕಾಳಿಂಗರಾಯನಿಗೆ ಆಕೆ ಯಾರು, ಏನು ನಡೆಯಿತ್ತೆನ್ನುವುದೇ ತಿಳಿದಿರುವುದಿಲ್ಲ, ಆ ಸಂದರ್ಭದಲ್ಲಿ ಜೀವ ಬಂದಾಕ್ಷಣ ಆಕೆಯನ್ನು ಕಂಡು ನೀನು ಯಾರೆಂದು ಕೇಳುತ್ತಾನೆ. ಚೆನ್ನವ್ವಳಿಗಾಗ ದುಃಖ ಸಂತೋಷಗಳೆರಡು ಉಮ್ಮಳಿಸಿ ಬರುತ್ತವೆ. ಜೀವನವೇ ಇಲ್ಲದ ದೇಹದೊಂದಿಗೆ ಯಾವುದೇ ಸುಖ, ಸಂತೋಷ, ಭಾವನೆಗಳು ಇರದೇ ಇರುವ ಜೀವನ ತನ್ನದಾಗುವುದೆಂದು ತಿಳಿದರು ತಂದೆಯ ಆಸೆ ಈಡೇರಿಕೆಗೆ, ಅವರ ಮಾತು ತಳ್ಳಿ ಹಾಕದೇ ಮದುವೆಯಾಗಿ ಇದ್ದು ಸತ್ತಂತೆ ಬಾಳ ಹೊರಟ ನಿರ್ಜೀವ ಬೊಂಬೆಗೆ ಭಾವನೆಗಳೇ ಇರಲಿಲ್ಲ ಗಂಡನ ಆತ್ಮ ದೇಹ ಸೇರಿ ಮತ್ತೆ ಆತ ಇಹಲೋಕಕ್ಕೆ ಬಂದಾಗ ಮತ್ತೆ ತನಗು ಜೀವನ ದೊರೆಯಿತು ತನ್ನ ತ್ಯಾಗಕ್ಕೆ ಅರ್ಥ ಸಿಕ್ಕಿತೆಂದು ಹಿಂದಿನ ಸನ್ನಿವೇಶದ ದುಃಖ ಕ್ಷಣ ಮಾತ್ರದಲ್ಲಿ ಮರೆಯಾಗಿ ಸಂತೋಷದ ಅಲೆಗಳು ತೇಲುವ ಸಂದರ್ಭದಲ್ಲಿ ಮತ್ತು ಹೊರಡದಾಗಿ ಮೌನವಾಗುತ್ತಾಳೆ, ಕಾಳಿಂಗರಾಯ ಚೆನ್ನಮ್ಮ

ಇಬ್ಬರು ಅರಮನೆಗೆ ಬಂದಾಗ ಕಾಳಿಂಗರಾಯನಿಗೆ. ಅರಸ – ಅರಸಿ, ಇತರರು ನಡೆದ ವಿಷಯವನ್ನು ಹೇಳುತ್ತಾರೆ. ಆಗ ಕಾಳಿಂಗರಾಯ ಚೆನ್ನಮನನ್ನು ಆತ ಮಡದಿಯೆಂದು ಸ್ವೀಕರಿಸುತ್ತಾನೆ.

ಇಲ್ಲಿ ಕಾಳಿಂಗರಾಯ ಚೆನ್ನಮ್ಮಳ ಭಕ್ತಿಯಿಂದ ಮರುಜೀವ ಪಡೆದ. ಅದು ವಿಷಯ ಬೇರೆ, ಆದರೆ ಒಬ್ಬ ತಂದೆಯಾಗಿ ಹಣಕ್ಕಾಗಿ ಮಗಳನ್ನು ಮಾರುವ ಸನ್ನಿವೇಶ. ಜೀವಂತವಾಗಿರುವ ವ್ಯಕ್ತಿಯಲ್ಲಿಯೇ ತನ್ನ ಬಾಳ ಸಂಗಾತಿಯಾಗಿ ನಡೆಯುವ ಮೌಲ್ಯಗಳು ಅವನಲ್ಲಿರಬೇಕೆಂದು ಆಸೆ ಪಡುವಾಗ ಮೌಲ್ಯಗಳು ಲಕ್ಷಣಗಳು. ಇಲ್ಲವಾದರೂ ಸಹ ಅನುಸರಿಸಿಕೊಂಡು ಕಷ್ಟನೋ ಸುಖನೋ ಬಾಳಬಹುದು, ಆದರೆ ಅದಕ್ಕೆ ಅವಕಾಶವೇ ಇಲ್ಲದ ಸಂದರ್ಭದಲ್ಲೂ. ಮದುವೆಗೆ ಅರ್ಥವೇ ಇಲ್ಲದಂತೆ ಆಕೆ ಜೀವನದಲ್ಲಿ ಒಂದು ವಿಚಿತ್ರ ಘಟನೆ ನಡೆದೆ ತೀರುತ್ತದೆ. ಇದು ಒಂದೇ ರೀತಿಯಲ್ಲಿ ಹೆಣ್ಣಿಗೆ ಸತ್ತ್ವ ಪರೀಕ್ಷೆಗಳು ನಡೆಯುತ್ತಿಲ್ಲಾ. ಹಣಕ್ಕಾಗಿ (ವರದಕ್ಷಿಣೆಗಾಗಿ) ಕಿರುಕುಳ ನೀಡುವುದು. ಅತ್ಯಾಚಾರ ನಡೆಯುತ್ತಲೆ ಬರುತ್ತಿದೆ ಆದರೆ ಚೆನ್ನಮ್ಮನ ಸ್ಥಿತಿ ಇದೆಲ್ಲದಕ್ಕಿಂತಲೂ ಶೋಷನೀಯವಾಗಿರುವಂತಹುದು. ಎಂತಹ ಕಲ್ಲು ಹೃದಯವನ್ನು ಕರಗಿಸುವ ಹೃದಯ ವಿದ್ರಾವಕ ದೃಶ್ಯ ಹೆಣದೊಂದಿಗೆ ಮದುವೆ ಮಾಡಲು ಸಿದ್ಧವಾದಾಗ ನೋಡಬಹುದು.

ಜನಪದ ನಾಯಕನಾಗಿರುವ ಕಾಳಿಂಗರಾಯನ ಕಥೆಯನ್ನು ಬಿತ್ತರಿಸ ಹೊರಟ ಹೆಬ್ಬಾಲೆಯವರು ಚೆನ್ನಮ್ಮಳ ಪಾತ್ರದ ಮೇಲೆ ಬೆಳಕು ಚೆಲ್ಲಿರುವುದು ಆ ಸಂದರ್ಭದಲ್ಲಿ ಸ್ತ್ರೀ ಒಬ್ಬಳ ಮಾನಸಿಕ ವೇದನೆ ತೊಳಲಾಟ. ಅತಂತ್ರ ಸ್ಥಿತಿ ಎಲ್ಲವು ಮನಮುಟ್ಟುವಂತೆ ತಿಳೀಪಡಿಸುವ ಉದ್ದೇಶದಿಂದ. ಈ ಸನ್ನಿವೇಶ ಸಹೃದಯರು ಅರ್ಥೈಯಿಸಿಕೊಂಡು ಸ್ತ್ರೀಯ ಆಸೆ – ಆಕಾಂಕ್ಷೆ, ಹಂಬಲ – ಬಯಕೆಗಳಿಗೂ ಬೆಲೆ ನೀಡಬೇಕು. ಅವಳಿಗೂ ಬದುಕುವ ಸಂಪೂರ್ಣ ಸ್ವಾತಂತ್ರ್ಯವಿದೆ. ಅದನ್ನ ಕಸಿದು ಪ್ರಪಾತಕ್ಕೆ ತಳ್ಳಬಾರದು ಕಾಳಿಂಗರಾಯ ಬದುಕದಿದ್ದರೆ ಚೆನ್ನಮ್ಮನ ಸ್ಥಿತಿ ಊಹಿಸಲಾಗದಷ್ಟು ವಿಚಿತ್ರವಾಗಿ ಸಾಗುತಿತ್ತೆಂಬುದು ಅವರವರ ಮನಸ್ಸಿನ ಆಲೋಚನೆಗೇ ಮೀಸಲು.

## ಬಿ) ಬಿಂಬದೊಳಗಣ ಪ್ರಾಣ ಮತ್ತು ದಲಿತತ್ವ

ದಲಿತ-ಬಂಡಾಯದ ಮನೋಧರ್ಮವುಳ್ಳ ಡಾ. ಹೆಬ್ಬಾಲೆಯವರು ಜನಪದರ ಬದುಕಿನಲ್ಲಿನ ತಾರತಮ್ಯಗಳನ್ನು ಹೋಗಲಾಡಿಸಿ ಸಮಾಜದಲ್ಲಿ ಸಮಾನತೆಯನ್ನು ಕಾಣುವ ಹಂಬಲದವರು, ಮನುಷ್ಯ ಸುವ್ಯವಸ್ಥಿತವಾದ ಬಾಳ್ವೆಗಾಗಿ ಹಲವು ರೀತಿ-ನೀತಿ-ನಿಯಮಗಳ ಕಟ್ಟುಪಾಡುಗಳ ಕಟ್ಟಡದಿಂದ ಸಮಾಜ ನಿರ್ಮಿಸಿಕೊಂಡ. ಆದರೆ ಕೆಲವೊಮ್ಮೆ ಅದೇ ಅವರಿಗೆ ಉಸಿರುಕಟ್ಟುತ್ತಿದೆ. ಅದನ್ನೆ ಹೆಬ್ಬಾಲೆ ನಾಗೇಶರು ತಮ್ಮ "ಬಿಂಬದೊಳಗಣ ಪ್ರಾಣ", ಕೃತಿಯಲ್ಲಿ ತತ್ವಪದಗಳ ಹಿನ್ನಲೆಯ ಮುಖಾಂತರ ಎತ್ತಿ ಹಿಡಿದಿದ್ದಾರೆ. ಸಮಾಜದಲ್ಲಿ ಆಯಾ ವೃತ್ತಿಗಳ ಆಧಾರದ ಮೇಲೆ ಮಾಡಿದ ವರ್ಗ ವ್ಯವಸ್ಥೆಯ ಕೊನೆ ಘಟ್ಟದವರು ದಲಿತರೆಂದೇ ಸಂಭೋದಿಸಲ್ಪಡುವ ಹೊಲೆ-ಮಾದಿಗರು ಯಾವ ರೀತಿಯಾದ ಶೋಚನೀಯ ಸ್ಥಿತಿಯನ್ನ ಬದುಕನ್ನಾಗಿಸಿಕೊಂಡು ಜೀವಿಸುತ್ತಾ ಬಂದಿದ್ದಾರೆ. ಎನ್ನುವುದನ್ನೆ ತತ್ವಪದಕಾರ ತನ್ನ ಅನುಭಾವಿಕ, ಅಧ್ಯಾತ್ಮಿಕ, ಭಾವನಾತ್ಮಕವಾಗಿ ಬಿತ್ತಿರಿಸಿರುವುದನ್ನು ಕೇಳಿ, ಹಾಗೂ ತನ್ನ ಸುತ್ತಲಿರುವ ಜನರ ನಿಜ ಬದುಕಿನ ದರ್ಶನ ಮಾಡಿರುವ ಕವಿಗಳು ದಯನೀಯವಾಗಿ ಬಿತ್ತರಿಸುತ್ತಾ ಅದು ಜಾಗತೀಕರಣದ ಸಂದರ್ಭದಲ್ಲಿ ಯಾವರೀತಿಯಾಗಿ ಮುಂದುವರಿದಿದೆ ಎನ್ನುವುದನ್ನ ಅವರು ಪ್ರಸ್ತಾಪಿಸಿದ್ದಾರೆ.

'ಬಿಂಬ ಎಂದರೆ 'ದೇಹ; 'ಪ್ರಾಣ' ಎಂದರೆ 'ಆತ್ಮ' ದೇಹದೊಳಗಣ ಆತ್ಮಕ್ಕೆ ಹೆಣ್ಣು-ಗಂಡೆಂಬ ಭೇದವಿಲ್ಲ, ಮೇಲು-ಕೀಳೆಂಬ ತಾರತಮ್ಯವಿಲ್ಲ. ಬಡವ ಬಲ್ಲಿದನೆಂಬ ಪರಿವಿಲ್ಲ ಅದು ಎಲ್ಲರಿಗೂ ಜೀವಿಸುವ ಸಮಾನ ಅಧಿಕಾರ ನೀಡಿದೆ. ಅಲ್ಲದೆ ಎಲ್ಲರ ದೇಹದಲ್ಲಿ ಹರಿಯುವುದು ಕಂಪು ರಕ್ತವೇ ಆದರೂ ಜನರ ನಡವಳಿಕೆಯಲ್ಲಿ, ಏಕೆ ಈ ಅಸಮಾನತೆ, ಶೋಷಣೆ, ಘರ್ಷಣೆ ಎಂಬುವುದೇ ಡಾ॥ ನಾಗೇಶರವರ ತರ್ಕವಾಗಿದೆ.

ಜನಪದರು ಜೀವನಕ್ಕಾಗಿ ತಮ-ತಮಗೆ ತಿಳಿದಂತಹ ಒಂದೊಂದು ಕಾಯಕದಲ್ಲಿ ತಮ್ಮನ್ನೆ ತೊಡಗಿಸಿಕೊಂಡರು. ಆ ಕಾರ್ಯದಲ್ಲಿ ಅಜ್ಜನಿಂದ-ಅಪ್ಪನಿಗೆ, ಅಪ್ಪನಿಂದ-ಮಗನಿಗೆ ಅರಿವು ಹೆಚ್ಚಾಗುತ್ತಾ ಹೋದಂತೆ ಬಹುತೇಕವಾಗಿ ಈ ಕಾಯಕ ಪರಂಪರಾಗತವಾದವು ವೃತ್ತಿಯಾಧಾರಿತವಾಗಿ ಜನ ಪದರಲ್ಲಿ ಜಾತಿಯ ಪರಿಕಲ್ಪನೆ ಮೂಡಿತು. [ಬಸವ ವಚನದಂತೆ ಕಾಸಿ ಕಮ್ಮಾರನಾದ, ಬೀಸಿ ಮಾರಯ್ಯನಾದ, ವೇದವನ್ನೊದಿ ಹಾರುವನಾದ] ಯಾರು ಹೆಚ್ಚು ಪ್ರತಿಫಲದ ಕೆಲಸಗಳನ್ನ, ಶ್ರೇಷ್ಠವಾದ ಕೆಲಸಗಳನ್ನ ಅವಲಂಬಿಸಿದವರು ಐಶಾರಾಮಿಯ ಬದುಕನ್ನ, ಸಾಂಸ್ಕೃತಿಕ ಹಾಗೂ ರಾಜಕೀಯವಾಗಿ ಪ್ರಬಲವಾದ ಬದುಕನ್ನ ತಮ್ಮದಾಗಿಸಿಕೊಂಡರು. ಇನ್ನೊಂದಡೆ ಊರಿನ ಸ್ವಚ್ಛತೆಯ ಕೆಲಸಗಳಲ್ಲಿ ಶ್ರಮದಾಯಕವಾದ ಕೆಲಸಗಳಲ್ಲಿ, ಚರ್ಮ ಹದ ಮಾಡುವ ಕೆಲಸಗಳಲ್ಲಿ ನಿರತವಾದವರು ಆರ್ಥಿಕವಾಗಿ, ರಾಜಕೀಯವಾಗಿ, ಸಾಂಸ್ಕೃತಿಕವಾಗಿ ಬಲು ಹಿಂದುಳಿದರು ಅವರಿಗೆ ವಿದ್ಯಾಭ್ಯಾಸದಿಂದ ದೂರವಿಡಲಾಯಿತು. ಆದರಿಂದ ಅವರು

ಉನ್ನತ ಹುದ್ದೆಗಳಲ್ಲಿ ಅವಕಾಶ ಪಡೆಯಲಾಗಲಿಲ್ಲ. ಅವರ ಭಾಷೆ ಪ್ರಾದೇಶಿಕತೆಗೆ ಸೀಮಿತವಾಗಿ ಒರಟಾಯಿತು, ಅವರು ಆರ್ಥಿಕವಾಗಿ ಹಿಂದುಳಿದಿದ್ದರಿಂದ ಧನಿಕರ, ಮೇಲ್‌ವರ್ಗದವರ ಮನೆಯಲ್ಲಿ ಕಎಲಸ ಮಾಡುವುದು ಅವರ ಮನೆಯ ತಂಗಳು ಅನ್ನವೇ ಮೃಷ್ಟಾನ್ನವಾಯಿತು. ಕೆಲವೊಮ್ಮೆ ಹಸಿವಿನ ಹಾಹಾಕಾರ ತಾಳದೇ ದನದ ಮಾಂಸವೇ ಹರಿದು ತಿಂದ ಕೆಲಸ ಆಯಾಸ ನೀಗಲು ಮತ್ತು ಬರಿಸುವ ಪಾನೀಯಗಳು ಸೇವಿಸುವುದು ಪ್ರಾರಂಭಿಸಿದ. ಹೀಗೆ ಭಿನ್ನ-ವಿಭಿನ್ನವಾದ ಆಹಾರ ಪದ್ಧತಿಗಳು ವೇಷಭೂಷಣಗಳು ರೂಢಿ ಸಂಪ್ರದಾಯಗಳು ಬೆಳೆದವು.

ಕೆಳವರ್ಗದವರನ್ನು ತಮ್ಮ ನೆರಳ ಹತ್ತಿರಕ್ಕೂ ಸೇರಲು ಬಿಡದೆ ಅವರ ಗುಡಿಸಲುಗಳನ್ನ ಊರ ಗಡಿಗಳಲ್ಲಿ ನಿರ್ಮಿಸಲಾಯಿತು ಊರಲ್ಲಿ ಅವರ ಪ್ರವೇಶ ಮುಂಜಾವು ಹಾಗೂ ಸಾಯಂಕಾಲದ ಸಮಯಗಳು ಹೊರತುಪಡಿಸಿ ಉಳಿದ ಸಂದರ್ಭಗಳಲ್ಲಿ ನಿಷೇಧಿಸಲಾಯಿತು, ಇವರ ಮೇಲೆ ಮೇಲ್‌ವರ್ಗದವರಿಂದ ಶೋಷಣೆ, ಕಿರುಕುಳ, ಅತ್ಯಾಚಾರ, ಹಿಂಸೆಗಳು ನಡೆಯಲ್ಪಟ್ಟದರಿಂದ ಸಮಾಜದಲ್ಲಿ ಸಮಾನತೆ ಮೂಲೆ ಗುಂಪಾಗಿ ಅಶಾಂತಿ ಎಲ್ಲೆಲ್ಲೂ ತಾಂಡವಾಡುತಿತ್ತು. ಇಂಥ ಸಂದರ್ಭದಲ್ಲಿ ಧರೆಗಿಳಿದವರೇ ಭಕ್ತಿ ಪಂಥದವರು. 12ನೇ ಶತಮಾನದಲ್ಲಿ ಉತ್ತರ ಕರ್ನಾಟಕದಲ್ಲಿ ಸಂಸ್ಕೃತಿಯ ಸೋಪಜ್ಞೀತೆ ಸಮೃದ್ಧಿಯಲ್ಲಿತ್ತು. ಸಮಾಜದಲ್ಲಿ ಶಾಂತಿ, ಸಮಾನತೆ, ಸಹಬಾಳ್ವೆಗಳು ಬೀಡುಬಿಟ್ಟಿದವು. ಇದಕ್ಕೆಲ್ಲಾ ಕಾರಣ ಅಧ್ಯಾತ್ಮ, ಸಿದ್ಧಿ, ಯೋಗಿಗಳ ಮತ್ತು ಅನುಭಾವಿಗಳಾಗಿರುವ ವಿರಕ್ತಿವಂತರು (ವಚನಕಾರರು) ತಾತ್ವಿಕತೆ, ಭಾವನಾತ್ಮಕತೆ, ತಾಂತ್ರಿಕತೆ, ಬೌದ್ಧಿಕತೆ, ವೈಚಾರಿಕತೆ, ಉದಾರತೆ ನೈತಿಕತೆ ಹಾಗೂ ನಿಷ್ಕಲ್ಮಶತೆ ಹೀಗೆ ಒಂದಿಲ್ಲೊಂದು ಕ್ಷೇತ್ರದಲ್ಲಿ ಪ್ರತಿಭಾವಂತರಾಗಿದ್ದು ವಿರೋಜಿತವಾಗಿ ಪ್ರಜ್ಞಾವಂತರನ್ನು ಬಡಿದೆಬ್ಬಿಸಿ ಸಂಸ್ಕೃತಿಯೊಳಗೆ ಅಂಟಿಕೊಂಡಿದ್ದ ಮೌಢ್ಯತೆ ಅಂಧಕಾರವನ್ನು ತೊಡೆದು ಹಾಕಿ ಸಾಂಸ್ಕೃತಿಕವಾದ ಚಳುವಳಿಗೆ ಬೆನ್ನೆಲುಬಾಗಿ ನಿಂತುಕೊಂಡರು. ಆದರೆ ಕಾಲಘಟ್ಟಗಳು ಉರುಳುತ್ತಿದ್ದಂತೆ ಬಹುಸಂಸ್ಕೃತಿಯ ಮಜಲುಗಳಲ್ಲಿ ವಿಚಿತ್ರವಾದ ಛಿದ್ರತೆ ಕಂಡುಬರುತ್ತದೆ. ಆಗ ಪ್ರತಿಯೊಂದು ಪ್ರಬಲ ವರ್ಗಕ್ಕೆ ಸೇರಿದ ಜನರು, ಆಳರಸರು ರಾಜ್ಯ ಕಟ್ಟಿ ಆಳಬೇಕೆಂಬ ಉತ್ಪ್ರೇಕ್ಷೆ ಹೆಚ್ಚಾಗಿ ದೇಶಿಯವಾಗಿ ಹಾಗೂ ಪ್ರಾದೇಶಿಕವಾಗಿ ಊರ್ಜಿತ ಹೂಡಿದ್ದ ಸುಲ್ತಾನರೂ, ದಖ್ಖನ್ ಪ್ರಾಂತದಲ್ಲಿ ಹಿಡಿತ ಸಾಧಿಸುತ್ತಿದ್ದ ಖಿಲ್ಜಿ ಸಂತತಿಯವರು, ಜೊತೆಗೆ ತುಘಲಕ್ ಮನೆತನದವರೂ ಒಬ್ಬರನ್ನೊಬ್ಬರು ಕಿತ್ತು ತಿನ್ನುತ್ತಿದ್ದರು. ಈ ಜನನಿ ಹೀಗಾಗಿ ಅಲ್ಲಿ ರಾಜಕೀಯ ಅರಾಜಕತೆ ಆರ್ಥಿಕ ಅಸ್ಥಿರತೆ, ಧಾರ್ಮಿಕ ದೌರ್ಬಲ್ಯತೆ ಸಾಂಸ್ಕೃತಿಕ ಸಂಕ್ಲಿಷ್ಟತೆಯ ಜ್ವಾಲೆ ತಾಂಡವಾಡುತಿತ್ತು. ಈ ಮಧ್ಯೆ ಜನಸಾಮಾನ್ಯರ ಬದುಕಿನ ವಿಸ್ಮೃತಿಗಳು ಛಿದ್ರಗೊಳ್ಳುವಂತಾಯಿತು. ಅಲ್ಲಿನ ಸಂಸ್ಕೃತಿ ಕಮರಿ ಹೋಗುತಿತ್ತು ಒಂದೆಡೆ ರಾಜಕೀಯ ಪ್ರಭುತ್ವಗಳ ಪೈಪೋಟಿಯಿಂದ ಜನಪದರ ಜೀವನ ತಲ್ಲಣಗೊಂಡಿದ್ದು, ಇನ್ನೊಂದೆಡೆ ಬರಗಾಲ, ಕ್ಷಾಮ, ರೋಗ-

ರುಜಿನಗಳು, ಅತ್ಯಾಚಾರ, ದರೋಡೆ, ಸಾವು-ನೋವು, ಡಾಂಬಿಕತೆ ಬಡತನ, ಸಾಮಾಜಿಕ ಅಸ್ಥಿರತೆಗಳಿಗೆ ತುತ್ತಾದರೂ.

ಮಾನಸಿಕವಾಗಿ, ಜಾತೀಯವಾಗಿ, ಆರ್ಥಿಕವಾಗಿ ಇದರಿಂದ ಹೆಚ್ಚಾಗಿ ಸಾಂಸ್ಕೃತಿಕವಾಗಿ ಕೊನೆಗೆ ದೈಹಿಕವಾಗಿಯೂ ಮುಗ್ಗರಿಸಿ ಹೋಗಿದ್ದ ಸಮಾಜದ ಕೆಳಘಟ್ಟದ ಅಲಕ್ಷಿತ ವ್ಯಕ್ತಿ ನೊಂದು-ಬೆಂದು, ಚಿತ್ತಮನಸ್ಸು ಇರದೇ ನೆಮ್ಮದಿ ಕಾಣದೆ, ಬುಸುಗುಟ್ಟಿದರೆ 'ಬಡವನ ಕೋಪ ದವಡೆಗೆ ಮೂಲ", ಎನ್ನುವಂತೆ ಯಾರಿಗೆ ಮುಟ್ಟುತ್ತದೆ,. ಅದಕ್ಕಾಗಿ ಆತ ರೊಚ್ಚಿಗೇಳದೆ ತನಗೆ ತಾನೇ ಸಮಾಧಾನ ಮಾಡಿಕೊಂಡ ಸೋಪಾಯಮಾನವಾಗಿ ತನ್ನ ಕಷ್ಟದ ಬದುಕಿನ ಅನುಭಾವಿಕ, ಭಾವನಾತ್ಮಕ ಅಧ್ಯಾತ್ಮಿಕ ಅನುಭವಗಳನ್ನ ಹಾಡನ್ನಾಗಿಸಿದ;

"ಯಾಕೆ ಬಂದೆನವ್ವ ಇಂಥ ಊರಿಗೆ

ತಂಗೆ ಧಾತರಿಲ್ಲದ ಹಾಳ್ ಕೇರಿಗೆ

ಬರಬಾರದಾಗಿತ್ತು ಇಂಥ ಊರಿಗೆ

ತಂಗಿ ಧಾತರಿಲ್ಲದ ಹಾಳ್ ಕೇರಿಗೆ

ಕಳ್ಳ ಸುಳ್ಳಾರು ಕೂಡಿ ಕಳ್ಳತನವ ಮಾಡಿ

ಒಳ್ಳೆಯ ರಾತ್ರಿ ನೋಡಿ ಕೊಳ್ಳೆ ಹೊಡೆದಾರು

ಪೆಂಜಿನಗಳ್ಳರು ಮೂರು ಸಂಜೆಯಲ್ಲಿ ನೆರನೋಡಿ

ವಂಚಿಸಿ ಹೊಯ್ದರಲ್ಲೊ ಬುಂಗಿ ಬಂಗಾರ ಬಿಡದೆ

ಜಲತಾರೆ ತಂಗೆ ನೋಡು ತಿರುದುಂಬಿ ಉಣ್ಣಲಿಲ್ಲ

ಮುರಿದು ಹಾಕಿದರು ಬೀಗ ಬರಿದು ಮುಡಿದರು ಮನೆಯ

ಹೆಣ್ಣು ಕಾದಿತ್ತು ಮಾಯೆ ಮಣ್ಣು ಪಾಲಾಗಿತ್ತು ನೋಡಾ

ಮಣ್ಣಿನ ಮಡುಬಾಳದೇವ ಗುಂಪಿನ ಸರಕಾರವಿದು.

ಹೀಗೆ ಹಾಡುವ

**ತತ್ವ ಪದಕಾರರಲ್ಲಿ 2 ವರ್ಗದವರಿದ್ದಾರೆ.**

1) ಮೊದಲನೇ ವ್ಯವಸ್ಥೆಯಲ್ಲಿನ ತತ್ವಪದಕಾರರು ಸಾಮಾಜಿಕವಾಗಿ, ಸಾಂಸ್ಕೃತಿಕವಾಗಿ, ಆರ್ಥಿಕವಾಗಿ, ರಾಜಕೀಯಾಗಿ ಅದರಲ್ಲೂ ಧಾರ್ಮಿಕವಾಗಿ ಅಭಿವೃದ್ಧಿಗೊಂಡ ವರ್ಗದವರಿರುತ್ತಾರೆ. ಅವರುಗಳೆಂದರೆ :- ಬ್ರಾಹ್ಮಣರು, ವೀರಶೈರು, ಶ್ರೀಮಂತರು, ಮಠದ ಅಧಿಪತಿಗಳು ಮತ್ತು ಪ್ರಭುತ್ವವನ್ನು ಅಂಗೈಯಲ್ಲಿ ಹಿಡಿದುಕೊಂಡಿರುವವರು ಸಮಾಜದೊಳಗಿನ ಜನರನ್ನು ಆಕರ್ಷಿಸುವ ಶಕ್ತಿ ಆಳುವ ದರ್ಪ, ಪ್ರಭುತ್ವ ನಡೆಸುವ ಕುಯುಕ್ತಿ ಹೊಂದಿದ ತತ್ವಪದಕಾರರು ಮನಃ ನಾಟುವ ಅನುಭಾವದ ಅನುಭವದೊಳಗಿನಿಂದ ತತ್ವಗಳನ್ನು ಸೃಷ್ಟಿಸಿದ್ದಾರೆ. ಸವರ್ಣೀಯರಾಗಿರುವ ಇವರಿಗೆ ಗುರು ದೀಕ್ಷೆಕೊಡುವ ಸನ್ಯಾಸಿಗಳು, ಸಂತರು, ಸಿದ್ದರು, ಯೋಗಿಗಳು ಇದ್ದರು

2) ಇನ್ನು ಎರಡನೇ ಜಗತ್ತಿನ ತತ್ವಪದಕಾರರು ಅರೆಬರೆ ಬದುಕನ್ನು ಸವೆಸುತ್ತಿರುವವರು. ಇಂಥವರಿಗೆ ಪರಿಪೂರ್ಣವಾಗಿ ಸವಲತ್ತುಗಳನ್ನು ಪಡೆಯಬಹುದು ಆದರೆ ಪಡೆಯುವವರಲ್ಲ. ಒಂದು ರೀತಿಯಲ್ಲಿ ವ್ಯವಸ್ಥೆ ಅವರಿಗೆ ಮಣೆ ಹಾಕುತ್ತದೆ ಆದರೆ ಅದರ ಮೇಲೆ ಕುಳಿತುಕೊಳ್ಳಲು ಬಿಡುವುದಿಲ್ಲ. ಇವರು ಸವರ್ಣೀಯರು ಮುಟ್ಟಿಸಿಕೊಳ್ಳುವಂತವರು ಆದರೆ ಮುಟ್ಟದೆ ಗಂಟಲಿನಿಂದ ಹೊರಗೆ ಮುಟ್ಟಿಸಿಕೊಳ್ಳುವ ಮಾತನಾಡಿ ತಮ್ಮತ್ತ ಆಕರ್ಷಣೆಗೆ ಒಳಪಡಿಸಿಕೊಳ್ಳುವಂಥವರು, ವ್ಯವಸ್ಥೆಯ ಒಳಗಿರುವ ಕುರುಬ, ಕುಂಬಾರ, ಅಗಸ, ಬಡಗಿ, ಮುಸ್ಲಿಮರು, ಕುಕ್ಕೆ ಬುಡುಬುಡಕೆಯವರ, ವೇಷಗಾರರು, ಜೋಗಿಗಳು ಡೊಂಬರು, ಬೇಡ ಇತ್ಯಾದಿ. ಕೆಳವರ್ಗದವರು ಸಾಮಾಜಿಕವಾಗಿ ತೀರ ಹಿಂದುಳಿದವರು ಅವರಿಗೆ ವ್ಯವಸ್ಥೆ ಅಪ್ಪಿಕೊಳ್ಳುತ್ತದೆ ಆರ್ಥಿಕವಾಗಿಯೂ ಅಷ್ಟು-ಇಷ್ಟು ಗಳಿಸಿಕೊಂಡು ಅಭಿವೃದ್ಧಿ ಹೊಂದುವ ಮಾನ್ಯತೆಗಳಿವೆ. ರಾಜಕೀಯವಾಗಿಯೂ ಕೂಡ ಅಧಿಕಾರ ಕೊಟ್ಟು ಒಳಗೆ ಸೇರಿಸಿಕೊಂಡು ದಳಪತಿಯ ಸ್ಥಾನ ಉಪಯೋಗಿಸಿಕೊಳ್ಳಬಹುದು ಇನ್ನೂ ಸಾಂಸ್ಕೃತಿಕವಾಗಿಯೂ ಅವರದೇ ಆದ ದೈವ ಧರ್ಮಗಳಿದ್ದೂ ಅಂದಿನಿಂದ- ಇಂದಿನವರೆಗೂ ಆರಾಧಿಸುವರು ಇವರು ಸಂಸಾರದ ಜಂಜಾಡದಲ್ಲಿ ತೇಲಿ ಮುಕ್ತಿಗಾಗಿ ದಡ ಸೇರಿ ಗುರುವನ್ನು ಪಡೆದು ಇವರು ಸಮಕಾಲೀನ ಸಮಸ್ಯೆಗಳ ಸಾಂಸ್ಕೃತಿಕ ವೀರರ ಸಾಧನೆಗೈದ ವ್ಯಕ್ತಿಗಳ ಐತಿಹ್ಯ, ಚರಿತ್ರೆ ಕುರಿತು ತತ್ವಗಳನ್ನು ಕಟ್ಟಿ ತಮ್ಮ ಬದುಕಿಗಾಗಿ ವೇಷ ಹಾಕಿಕೊಂಡು. ಸೋಗಿನಲ್ಲಿ ಏಕತಾರಿ ಹಿಡಿದು ಊರು ಊರು ಅಲೆಯುತ್ತಾ ಹಾಡುವರು ಅಲ್ಲಿ ಬದುಕಿನಲ್ಲಿನ ಜಂಜಾಟ, ಸಂಸ್ಕೃತಿಯ ಏರುಪೇರುಗಳು,

ಸಂಸಾರ, ಬರಗಾಲಗಳು ಸತ್ಯ ಜಗತ್ತು ಹೇಗಿರಬೇಕೆಂಬ ಅಂಶಗಳು ಮನಃ ಕಲಕುತ್ತವೆ ಅವು ಇಂದು ಭಜನೆ ಪದಗಳಾಗಿ ರೂಪಾಂತರಗೊಂಡಿವೆ.

3) ನಾಗೇಶ ಹೆಬ್ಬಾಲೆಯವರ ಪ್ರಮುಖ ಆಶಯ ಮೂರನೇ ವರ್ಗದ ತತ್ವಪದಕಾರರ ಮನದಾಳದ ನೋವನ್ನ ಬಿಂಬಿಸುವುದು ಇವರು ಹಿಂದು ಧರ್ಮದ ಪರಿಕಲ್ಪನೆಯ ಜಾತಿಯ ಒಳಸುಳಿಗಳನ್ನು ವಿಂಗಡಿಸಿ ಅವರಲ್ಲಿ ಅಸ್ಪ್ರಶ್ಯತೆಯೆಂದು, ಮುಟ್ಟಿಸಿಕೊಳ್ಳಲಾರದವರೆಂದು ಹಣೆಪಟ್ಟಿ ಕಟ್ಟಿ ಕೊಂಡು ಮೂಲೆಗುಂಪಾದವರು ಇವರ ಒಡಲಿನ ಬನಿಯಿಂದ ಉದ್ಭವಗೊಂಡ ನೋವುಗಳೇ ತತ್ವಗಳ ಜ್ಯೋತಿಗಳಾಗಿ ಬೆಳಗಿವೆ.

ನೀರ ಮೇಲಣ ಗುಳೆಯಂತೆ; ಕ್ಷಣಿಕ [ಸ್ವಲ್ಪ ದಿನಗಳ ಕಾಲವೇ] ಅದಕ್ಕಾಗಿ ಯಾಕೆ ಮನುಷ್ಯನಲ್ಲಿಷ್ಟು ಆಸೆ, ಚಿಂತೆ, ಅಸೂಯೆ, ಅಹಂಕಾರ ಅವೆಲ್ಲವುಗಳಿಂದ ಆತ ಕ್ಷುಲ್ಲಕ ಸುಖವನ್ನು ಪಡೆಯಬಹುದು. ಮುಕ್ತಿಯನ್ನ ಪಡೆಯಲಾರ, ಗಳಿಸಿದ್ದನ್ನೆಲ್ಲಾ ಹೊತ್ತುಕೊಂಡು ಹೋಗಲಾರ. ಆದರಿಂದ ಜೀವನಾವೃದ್ಧಿಯಲ್ಲಿ ಎಲ್ಲರೊಂದಿಗು ಪ್ರೀತಿ, ವಿಶ್ವಾಸ, ಸೌಹರ್ದತೆಯಿಂದ ಬಾಳಬೇಕು. ಗೌರವದಿಂದ ಕಾಣಬೇಕು, ಸಹಾಯ-ಸಹಕಾರಗಳನ್ನೆಲ್ಲಾ ಆದಷ್ಟು ಮಾಡಬೇಕು. ನಿಜಭಕ್ತಿಯನ್ನ ಮನದಾಳದಲ್ಲಿ ನೆಲೆಸಬೇಕು ಎಂಬುದು ಡಾ॥ ಹೆಬ್ಬಾಲೆಯವರ ಆಶಯವಾಗಿದ್ದು ಆ ಆಶಯವೇ ವನಚಕಾರರಲ್ಲಿ, ಕೀರ್ತನಕಾರರಲ್ಲಿ, ತತ್ವಪದಕಾರರಲ್ಲಿ ಸಮಾಜ ಸುಧಾರಕರಲ್ಲಿ ಅಡಗಿತ್ತೆಂಬುದು ಎತ್ತಿ ಹಿಡಿದಿದ್ದಾರೆ. ಇದನ್ನೆ ಈ ಮುಂದಿನ ಪದ್ಯದಲ್ಲಿ ಹಿಡಿದಿಟ್ಟಿದ್ದಾರೆ.

ಬಿಂಬದೊಳಗೆ ಒಂದೇ ಪ್ರಾಣ
ಕಂಬಸೂತ್ರದ ಬೊಂಬಿಯಂತೆ
ಎಂದಿಗಿದ್ದರೊಂದು ದಿನ
ಸಾವು ತಪ್ಪದು ಮನುಜ ಸಾವು ತಪ್ಪದು
ಹುಟ್ಟುವಾಗ ತಾರಲಿಲ್ಲ
ಸಾಯುವಾಗ ಕೊಂಡೋಗಲಿಲ್ಲ
ಸುಟ್ಟುಸುಟ್ಟು ಸುಣ್ಣದರಳಿ
ತಾಗಿತ್ತಿದ್ರೇಹ ಮನುಜ ಆಗಿತ್ತದ್ರೇಹ
ಹೊಟ್ಟೆ ಬಹಳ ಕೆಟ್ಟದಯ್ಯ
ಎಷ್ಟೇ ಕಷ್ಟ ಮಾಡಿದರೂ
ಬಿಟ್ಟು ಹೋಗುವಾಗ ಗೇಣು

ಬಟ್ಟೆಗತಿಯಿಲ್ಲದೆ ಮನುಜ

ಅನ್ನವಸ್ತ್ರ ಭೋಗಿಯಾಗಿ

ತನ್ನೊಳಿದ್ದು ಉಣ್ಣಲಿಲ್ಲ

ಮಣ್ಣು ಪಾಲೊಂದಾದಮೇಲೆ

ಯಾರಿಗಾಗುವುದು ಈ ಬದುಕು ಯಾರಿಗಾಗುವುದು.

ಒಳ್ಳೆ ವಸ್ತ್ರ ಹೊದ್ದುಕೊಂಡು

ಬೆಳ್ಳಿಬಂಗಾರ ಇಟ್ಟುಕೊಂಡು

ಕಳ್ಳಂಜಯ ಗೊಂಬೆಯಂತೆ

ಆಗುತಿಹುದು ಈ ದೇಹ ಆಗುತಿಹುದು

ಹಳ್ಳ ಹರಿದು ಹೋಗುವಾಗ

ಗುಳ್ಳೆ ಎದ್ದು ಹೊಡೆಯುವಂತೆ

ಗುಳ್ಳೆ ಮೊರೆಯಂತೆ ಕಾಣೊ

ಸಂಸಾರದಾಟವೋ ಮನುಜ ಸಂಸಾರದಾಟವೋ

ಹೀಗೆ ಜನರು ಮಾಡುವ ಭೇದಭಾವಗಳನ್ನು ಅವರು ನಿರಾಕರಿಸುತ್ತಾರೆ. ಮುಟ್ಟಿಸಿಕೊಳ್ಳಲಾರದವರೂ (ಅಸ್ಪೃಶ್ಯರೂ) ಕೂಡ ನಮ್ಮಂತೆಯೇ ಅಲ್ಲವೇ? ಅವರು ಕೂಡ ಮನುಷ್ಯರಲ್ಲವೇ? ಅವರ ಶರೀರದ ನರ ನಾಡಿಗಳಲ್ಲಿ ಹರಿದಾಡುತ್ತಿರುವುದು ಕೆಂಪು ರಕ್ತವಲ್ಲವೇ? ಅವರು ಕೂಡ ಉಸಿರಾಡುತ್ತಿರುವ ಗಾಳಿ ವಾಸಿಸುತ್ತಿರುವ ನೆಲ, ಕುಡಿಯುವ ನೀರು ಹಾಕಿಕೊಳ್ಳುವ ಬಟ್ಟೆ, ನಡೆದಾಡುತ್ತಿರುವ ದಾರಿ ಹೀಗೆ ಅನೇಕ ಅಂಶಗಳು ಒಂದೇ ಆಗಿದ್ದರೂ ಎಲ್ಲವುಗಳನ್ನ ಮರೆತಂತಿದ್ದ ಕಾಲವಿತ್ತು ಆದರೆ ಪ್ರಭುತ್ವದ ಮನದಲ್ಲಿರುವ ಸವರ್ಣಿಯರು ತಮ್ಮ ಜ್ಞಾನದ ಆಳದಲ್ಲಿ ಮುಟ್ಟಿಸಿಕೊಳ್ಳಲಾರದವರ ಜೀವಗಳೊಂದಿಗೆ ಕಿಂಚಿತ್ತೂ ದಿನತೆಯಾಗಲಿ, ಕರುಣಿಯಾಗಲಿ, ಪ್ರಾಂಚಲ್ಯತೆವುಳ್ಳ ಮನಸ್ಸುಗಳಾಗಲಿ ಇರಲಿಲ್ಲ. ಇಂತಹ ಸಂದಿಗ್ದತೆಯ ಸಂದರ್ಭದಲ್ಲಿ ಸಮಾಜದ ವ್ಯಾಕುಲತೆ ಒಳಗೆ ತಾಂಡವಾಡುತ್ತಿದ್ದಂತಹ ಜಾತಿಪದ್ಧತಿ ಭೂಮಾಕಾರಾಗಿ ಬೆಳೆದು ನಿಂತಿತ್ತು ಇದನ್ನೆ ತತ್ವಪದಕಾರರು ಈ ತೀರಸ್ಕೃತ ಜನರ ಜೀವಂತ ಪರದೆಯ ಹೊಸತನವನ್ನ ಕಟ್ಟಿ ಹಾಡಿರುವುದರಲ್ಲಿನ ಅಂದಿನ ಕೆಳವರ್ಗದವರ ಬದುಕಿನ ಬವಣೆಯ ಬಿಚ್ಚಿಡುತ್ತಾ ಅಂದಿನ ಜನರ ಸ್ಥಿತಿಯ ಬಗೆಗೆ ಕಳವಳ ಪಡುತ್ತಾ ಓದುಗರಲ್ಲಿ ಆ ಸಮಾಜದ ಸ್ಥಿತಿಯ ಕಲ್ಪನೆಯನ್ನು ಮೂಡಿಸಿದ್ದಾರೆ.

## ಸಿ) ಕಾವೇರಿ ಜಾನಪದ – ನಿಸರ್ಗದ ಕುರುಹುಗಳು :–

ನಿಸರ್ಗದ ರಮಣಿಯ ತಾಣಾಗಿರುವ ಕೊಡಗಿನ ಮಡಿಲ ಮಗುವಾಗಿ ಬೆಳೆದ ನಾಗೇಶರವರು ಕರ್ನಾಟಕ ಜೀವನದಿಯೆಂದೆ ಪೂಜ್ಯತೆಯೆನ್ನು ಪಡೆದ ಕಾವೇರಿ ಮಾತೆಯ ಕುರಿತು "ಕಾವೇರಿ ಜಾನಪದ" ಎಂಬ ಕೃತಿಯನ್ನು ಸಹೃದಯರಿಗೆ ಅರ್ಪಿಸಿದ್ದಾರೆ. ಇದರಲ್ಲಿ ಕಾವೇರಿಯ ಪೌರಾಣಿಕ ಹಿನ್ನಲೆ ಆಳ ಸಾಂಸ್ಕೃತಿಕ ರೂಪ, ಆ ಭಾಗದ ರೈತರ ಜೀವದಾತೆ, ಅವಳ ಹರಿಯುವಿಕೆಯಿಂದ ನಿರ್ಮಾಣಗೊಂಡಂತಹ ಸೌಂದರ್ಯ ಸೂಸುವಂತಹ ತಾಣಗಳು ಜಾನಪದೀಯ, ಸಂಪ್ರದಾಯ, ಆಚಾರ–ವಿಚಾರ, ಹಬ್ಬ–ಹರಿದಿನಗಳು ಕಲೆಗಳು ಎಲ್ಲವೂ ಈ ಕೃತಿ ಒಳಗೊಂಡಿದೆ ಅಲ್ಲದೆ ನಾಡಿನ ಆರ್ಥಿಕ ಅಭಿವೃದ್ಧಿಯಲ್ಲಿ ಕಾವೇರಿಯ ಕೊಡುಗೆಯ ಜೊತೆ ಜೊತೆಗೆ ಕರ್ನಾಟಕ ತಮಿಳುನಾಡುಗಳ ನಡುವೆ ಉದ್ಭವಿಸುವ ಸಮಸ್ಯೆಗಳ ಅಂಕುರವನ್ನು ಜಾನಪದೀಯ ಹಿನ್ನಲೆಯಲ್ಲಿ ಪ್ರಸ್ತಾಪ ಮಾಡಿದ್ದಾರೆ.

**<u>ಕಾವೇರಿಯ ಜನನ :–</u>** ನಿಸರ್ಗದ ಮಡಿಲಿನಲ್ಲಿ ಎಲ್ಲವೂ ಮಿಳಿತಗೊಂಡಿರುತ್ತದೆ. ಅದು ಉಂಟು ಇದು ಇಲ್ಲವೆಂಬ ಮಾತಿಲ್ಲ ಸಾಮಾನ್ಯವಾಗಿ ಗುಡ್ಡ, ಬೆಟ್ಟ, ಪರ್ವತಗಳಲ್ಲಿ ನದಿಗಳು ಜನ್ಮ ಪಡೆದಿರುತ್ತವೆ. ಕಾವೇರಿ ನದಿ ಸ್ವರೂಪಿಣಿ ಇದಕ್ಕೆ ಹೊರತಾಗಿಲ್ಲ. ಜನಪದರು ಶತಶತಮಾನಗಳಿಂದಲೂ ನದಿಯನ್ನು ದೈವವೆಂದು ನಂಬಿ ಆರಾಧಿಸಿಕೊಂಡು ಬಂದಿರುತ್ತಾರೆ. ಇವತ್ತು ನಾವು ಏನು ಜಾಗತೀಕರಣದ ಅಬ್ಬರ, ಉದಾರೀಕರಣದ ನೀತಿ ಆಧುನಿಕತೆಯ ಆದ್ಯತೆ ಎಂದು ಬಡಬಡಿಸುತ್ತಿದ್ದರೂ ಜನರಲ್ಲಿರುವ ನಂಬಿಕೆ, ಆಚರಣೆ, ಪದ್ಧತಿ, ರೂಢಿಗಳಿಗೆ ಪ್ರಬಲವಾಗಿ ತಡೆಯನ್ನುಂಟು ಮಾಡುವುದಿಲ್ಲ. ಎಂಬುದಕ್ಕೆ ಇವತ್ತಿನ ಸಂದರ್ಭದಲ್ಲೂ ನದಿ ಹುಟ್ಟಿನ ಬಗ್ಗೆ ಇರುವ ಕಥೆ, ಐತಿಹ್ಯ, ಪುರಾಣ, ಹಾಡುಗಳು ಪ್ರಚಲಿತದಲಿರುವುದು ಕಾಣಬಹುದು.

ಸಹ್ಯಾದ್ರಿ ಪರಶಿವನ ಕೈಲಾಸಾಗಿರುತ್ತದೆ, ಅಗಸ್ತ್ಯಮುನಿ ತನ್ನ ಶಿಷ್ಯರೊಂದಿಗೆ ಅಲ್ಲಿಗೆ ಹೋಗುತ್ತಾನೆ. ಆ ಸ್ಥಳವು ಋಷಿ ಪುಂಗವರ ಆಶ್ರಯವನ್ನೊಳಗೊಂಡಿರುತ್ತದೆ. ಅಲ್ಲಿಂದ ಶಿಷ್ಯರೊಡಗೂಡಿ ಬ್ರಹ್ಮಗಿರಿಗೆ ಬರುತ್ತಾನೆ. ಅಲ್ಲಿ ವಶಿಷ್ಟರು ಇರುತ್ತಾರೆ. ಅಗಸ್ತ್ಯಮುನಿ ಹಾಗೂ ಶಿಷ್ಯರನ್ನು ಗೌರವದಿಂದ ಸ್ವಾಗತಿಸುವರು, ಅಗಸ್ತ್ಯ ಋಷಿಮುನಿ ವಶಿಷ್ಟರಿಂದ ಅತಿಥ್ಯವನ್ನು ಸ್ವೀಕರಿಸುವರು, ಅಲ್ಲದೆ ಅಲ್ಲಿರುವ ಅಖಿಲಧಾರೆ ಶುಚಿಸ್ಮಿತೆಯಾದ ಕಾವೇರಿಯನ್ನು ಕಾಣುತ್ತಾನೆ. ಅವಳನ್ನು ಕಂಡಕೂಡಲೇ ಮೋಹಿತನಾಗುವನು. ವಿಧಿಯುಕ್ತವಾಗಿ ವಿವಾಹವಾಗುತ್ತಾನೆ. ವಿವಾಹದ ನಿರ್ಬಂಧದಂತೆ ಕಾವೇರಿ ಅಗಸ್ತ್ಯರಿಗೆ ತನ್ನ ಷರತ್ತನ್ನು ಹಾಕುವಳು. ಅದೇನೆಂದರೆ "ನನ್ನನ್ನು ಯಾವತ್ತು ಎಂದೂ ಒಬ್ಬೊಂಟಿಗಳಾಗಿ ತೊರೆದು ಹೋಗಬಾರದು", ಆದರೆ ವಚನವನ್ನು ತಪ್ಪಿದ ಅಗಸ್ತ್ಯರು ಕಾವೇರಿಯನ್ನು ತನ್ನ ಕಮಂಡಲುವಿನಲ್ಲಿರಿಸಿ ಕನಿಕೆ ನದಿಯಲ್ಲಿ ಸ್ನಾನಕ್ಕೆ ಹೋಗುತ್ತಾರೆ, ಅದನ್ನ ಸಹಿಸದ ಕಾವೇರಿ ಕಮಂಡಲುವಿನಿಂದ

ಧುಮುಕಿ ಜಲರೂಪಿಣಿಯಾಗಿ ಹರಿಯುತ್ತಾಳೆ ಕೊಡಗಿನ ಬ್ರಹ್ಮಗಿರಿಯ ಬೆಟ್ಟ ರಮಣೀಯವಾಗಿದೆ, ಅಲ್ಲಿ ಕಾವೇರಿ ಮಾತೆ ಜನನವಾಯಿತು. ಆ ಸ್ಥಳವನ್ನು ತಲಕಾವೇರಿಯೆಂದು ಕರೆಯುತ್ತಾರೆ.

<u>ನಿಸರ್ಗ :-</u> ಕಾವೇರಿ ಜನಿಸಿದ ಸ್ಥಳವೇ ಕಾವೇರಿ ಕುಂಡಿಕೆ ಅಥವಾ 'ಪುಷ್ಕರಣಿ' ಎಂದು ಇಂದಿಗೂ ಪ್ರಸಿದ್ಧವಾಗಿದೆ. ಮಳೆ ಬೀಳಲಿ ಬೀಳದೆ ಇರಲಿ, ಬೇಸಿಗೆಯಾಗಲಿ, ಚಳಿಗಾಲವಾಗಲೀ ಸದಾ ಈ ಕುಂಡದಲ್ಲಿ ನೀರು ಇರುತ್ತವೆ. ಇದರ ಒಂದು ವಿಶಿಷ್ಟ ಸೊಬಗೆಂದರೇ ಯಾವ ಕಾರಣಕ್ಕೂ ನೀರು ಹೆಚ್ಚು ಕಡಿಮೆಯಾಗದಿರುವುದು ಕುಂಡದ ಹಿಂದೆ ಪುಟ್ಟದಾದ ಕಾವೇರಿ ಮಾತೆಯ ವಿಗ್ರಹವನ್ನು ಕಡೆದು ನಿಲ್ಲಿಸಲಾಗಿದ್ದು, ಕುಂಡದ ಮುಂದೆ ಒಂದು ಕೊಳ ಕುಂಡದಿಂದ ನೀರು ಕೊಳಕ್ಕೆ ಬೀಳುತ್ತದೆ. ಕೊಳದಿಂದ ಕಾವೇರಿ ಗುಪ್ತ ಗಾಮಿನಿಯಾಗಿ ನಿರಂತರವಾಗಿ ಹರಿಯುತ್ತಿದ್ದಾಳೆ. ಆ ಸ್ಥಳ ನಿಶಾಚರ ನೋಡಲು ಹಸಿರು ಸೊಬಗು ಕಣ್ ತಣಿಸುತ್ತದೆ. ದಟ್ಟಾರಣ್ಯ ಹಸಿರುಮಯ ಇಳಿಜಾರು ಪ್ರದೇಶ, ಬೃಹದಾಕಾರವಾಗಿ ಬೆಳೆದು ನಿಂತ ಮರಗಳು ಕಲ್ಲೂ ಬಂಡೆಗಳ ನಡುವೆ ಸರ್ಪದಂತೆ ಬಳುಕಿ ಹರಿಯುತ್ತಾ, ಹೆಣ್ಣು ಚಂಚಲೆ ಎಂಬುದರ ಪ್ರತೀಕವೆಂಬಂತೆ ಒಮ್ಮೊಮ್ಮೆ ಮರೆಯಾಗಿ ಮತ್ತೆ ಮಾಯಾಲೋಕ ಸೃಷ್ಟಿಸುವ ಸೊಬಗು ಕಾವೇರಿಯು ಚೇರಂಗಾಲ ಗ್ರಾಮದ ಹತ್ತಿರ ಸೂಸುವಳು, ಅದನ್ನು ನಾಗತೀರ್ಥವೆಂದು ಕರೆಯುವರು [ಇದಕ್ಕೆ ಕಾರಣ ಹಾವಿನಂತೆ ಬಂಡೆಗಳಿಗೆ ಸುತ್ತಿ ಸಾಗುವುದರಿಂದ]

<u>ಭಾಗಮಂಡಲ :-</u> ಇದು ಕಾವೇರಿಮಾತೆಯ ಸಂಗಮದ ತವರೂರು ಎನ್ನಬಹುದು ಇಲ್ಲಿ ಕಾವೇರಿ, ಕನ್ನಿಕೆ ಹಾಗೂ ಸುಜ್ಯೋತಿ ಎಂಬ ನದಿಗಳು ಸಮ್ಮಿಲನಗೊಳ್ಳುವ ಸ್ಥಳ. ಈ 3 ನದಿಗಳ ಸಂಗಮ ಸ್ಥಾನಕ್ಕೆ 'ತ್ರಿವೇಣಿ' ಎಂದು ಕರೆಯುತ್ತಾರೆ. 3 ನದಿಗಳು ಕೂಡುವ ರಮಣೀಯತೆಯೊಂದಿಗೆ ಇಳೀಜಾರವಿನಿಂದ ಕೂಡಿದ ಶೀತಮಯ ಪ್ರದೇಶ ಜೊತೆಗೆ ಕಡಿದಾದ ಭೂಪ್ರದೇಶ ಈ ಎಲ್ಲಾ ನಿಸರ್ಗ ಸಂಭ್ರಮದೊಂದಿಗೆ ಜನಪದರು ವರ್ಷಕ್ಕೊಮ್ಮೆ ನಡೆಸುವ ಜಾತ್ರೆಯ ಸಂಭ್ರಮವೂ ಸೇರಿ ಆ ಕ್ಷಣಗಳು ಕಣ್ಣಿಗೆ ರಸದೂಟವನ್ನು ಬಡಿಸುತ್ತವೆ. ಕಣ್ಣ-ಮನಗಳು ತಣಿಸುವ ಕಾವೇರಿಯ ಸಂಗಮ ಜನರಿಚ್ಛೆ ಹರಕೆಗಳನ್ನಿಡೇರಿಸುವ ಭಗಂಡೇಶ್ವರನ ಪುಣ್ಯ ಸ್ಥಳವು ಹೌದು ಅದಕ್ಕೆ ಇದನ್ನು ದಕ್ಷಿಣ ಭಾರತೀಯರ 'ಪುಣ್ಯಕ್ಷೇತ್ರ' ವೆಂದೇ ಕರೆಯುವರು.

ಇಲ್ಲಿಂದ ಮುಂದೆ ಜುಳುಜುಳುನೆ ಹರಿಯುವ ಕಾವೇರಿ ಹಲವಾರು ಪುಣ್ಯಕ್ಷೇತ್ರ-ಗಳನ್ನುಬೆಟ್ಟದಡಿಯಲ್ಲಿ ನಿರ್ಮಿಸಿ ಅಲ್ಲಿಗೆ ಆಸ್ತಿಕೆ-ನಾಸ್ತಿಕರಿಬ್ಬರನ್ನು ಸೆಳೆಯುತ್ತಾಳೆ. ಹೀಗೆ ನಡೆಯುವ ಕ್ಷೇತ್ರಗಳಲ್ಲಿ 'ಸುಬ್ರಹ್ಮಣ್ಯಸ್ವಾಮಿ ಬೆಟ್ಟ' (ಕೋರಂಗಾಲ) ಎಡದಂಡೆಯ ಮೇಲಿರುವ ಶಿವನ ಸನ್ನಿಧಿ (ಹರಿಶ್ಚಂದ್ರ ಸ್ಥಳ - ಪಾಲುರು) ಮುಂದೆ ನಾಪೋಕ್ಲು ಎಂಬ ಗ್ರಾಮ ಇದೊಂದು ಕೊಡವ ಸಂಸ್ಕೃತಿಯ ಉಗ್ರಾಣ ಇಲ್ಲಿನ ಭೂಪ್ರದೇಶ ತಗ್ಗು-ಎತ್ತರವಾದ ಹಳ್ಳಕೊಳ್ಳಗಳಿಂದ ಕೂಡಿದ ವಿಸ್ತಾರ ಪ್ರದೇಶ ಅದಕ್ಕೆ ಮೆರಗು ನೀಡುವ

ಕಾಫಿಯ ತೋಟಗಳು ಇತರ ವಾಣಿಜ್ಯ ಬೆಳೆಗಳು ಬೆಳೆಯುವ ತಾಣವಿದೆ ಇಲಿಂದ ಬೇತರಿ, ನೆಲ್ಲಿಹುದಿಕೇರಿ, ಸಿದ್ದಾಪೂರ, ನಂಜರಾಯಪಟ್ಟಣ ರಂಗಸಮುದ್ರದಿಂದ ಕುಶಾಲನಗರಕ್ಕೆ ತಲುಪುವಳು ಈ ಮಧ್ಯ ಕಾವೇರಿ ಚಿಕೋಲಿ ಹೊಳೆಯೊಂದಿಗೆ ಬೆರೆತು ಸುಮಾರು 1–2 ಕಿ.ಮೀಗಳಷ್ಟು ಅಗಲವಾಗಿ ಹರಿಯುತ್ತಾಳೆ. ಈ ಸ್ಥಳ ನೋಡಲು ರುದ್ರ ರಮಣೀಯವಾಗಿದೆ, ಇಲ್ಲಿ ಆಂಜನೆಯ ಸ್ವಾಮಿ, ಅಯ್ಯಪ್ಪ ಸ್ವಾಮಿ, ಗಣಪತಿ, ಕನ್ನಿಕಾ ಪರಿಮೇಶ್ವರಿಯ ದೇವಾಲಯಗಳಿವೆ. ಇಲ್ಲಿಂದ ಮುಂದೆ ಕಾವೇರಿ ನದಿ ಹಾರಂಗಿ ನದಿಯೊಂದಿಗೆ ಮಿಲನ ಹೊಂದಿ ಹರಿವ ಸ್ಥಳ ಕಣಿವೆಯಿಂದ ಕೂಡಿದ್ದು, ಅಲ್ಲದೆ ಅಲ್ಲಿ ನದಿಗೆ ಸುಮಾರು ಅರ್ಧ ಕಿಲೋಮಿಟರನಷ್ಟು ದೂರದವರೆಗೆ ಆಣೆಕಟ್ಟನ್ನು ಕಟ್ಟಲಾಗಿದ್ದು ಅಲ್ಲಿ ತುಂಬಾ ವಿಶಾಲವಾಗಿ ಹರಿಯುವ ಈಕೆ ರಮಣೀಯವಾಗಿ ಮೋಹಕವಾಗಿ ಹೃನ್ಮನಗಳಿಗೆ ಸಂತೋಷವನ್ನು ನೀಡುತ್ತಾಳೆ.

ಕಾವೇರಿ ಜಾನಪದಿಂದ ನಿಸರ್ಗ ಕವಿ, ಜನಪದ ಕವಿಗಳೆಂದೇ ಹೇಳಬಹುದಾದ ನಾಗೇಶರವರ ಹುಟ್ಟೂರಾದ ಹೆಬ್ಬಾಲೆಯಲ್ಲಿ ನಯನ ಮನೋಹರವಾಗಿ, ಪ್ರಶಾಂತವಾಗಿ ಮುನ್ನಡೆಯುವ, ಮಾತೆಯನ್ನ ದಾಟಿ ಸುಳಿಕೊಟೇ ಗ್ರಾಮಕ್ಕೆ ಸಂಪರ್ಕ ವ್ಯವಸ್ಥೆ ಪಡೆಯಲು 1 ಕಿ.ಮೀಷ್ಟು ಉದ್ದಕ್ಕೆ ಅಣಿಕಟ್ಟು ನಿರ್ಮಾಣವಾಗಿದೆ. ರಾಮನಾಥಪುರದೆಡೆ ತನ್ನ ಹರಿವನ್ನು ಮುಂದುವರೆಸುವ ಕಾವೇರಿ ತನ್ನೊಳಗೆ ಗವಿಗಲ್ಲನ್ನು ಹೊಂದಿದ್ದಾಳೆ. ಇಲ್ಲಿಂದ ಹೊಳೆನರಸಿಪುರ, ಹೆಪ್ಪೆ ಸೂರಿಗೆ ಬಂದ ಕಾವೇರಿ ತನ್ನ ದಿಕ್ಕನ್ನ ಬದಲಾಯಿಸಿ ದಕ್ಷಿಣಾಭಿಮುಖವಾಗಿ ಹರಿಯುತ್ತಾಳೆ. ಚುಂಚನಕಟ್ಟೆಗೆ ಬರುವ ಈಕೆ ಸುಮಾರು 3 5 ಮೀಟರ್ ಎತ್ತರದಿಂದ ಪ್ರಪಾತಕ್ಕೆ ಬೀಳುವಲ್ಲಿ ಸುಂದರವಾದ ಜಲಪಾತವನ್ನೆ ನಿರ್ಮಿಸಿದ್ದಾಳೆ. ಸುತ್ತಲಿನ ಹಸಿರುಮಯವಾದಂತಹ ವಾತಾವರಣ, ಜಲಪಾತದಲ್ಲಿ ಉಂಟಾಗುವ ಬಿಳಿಬುಗ್ಗೆಗಳು ಮುಂದೆ ಕಲ್ಲು ಬಂಡೆಗಳನ್ನ ಸುತ್ತಿಕೊಂಡು ಭೋರ್ಗರೆಯುತ್ತಾ ಹರಿಯುವುದನ್ನ ನೋಡುವುದೇ ಉಲ್ಲಾಸದ ವಿಷಯ.

ಕಾವೇರಿ ನಿರ್ಮಿಸುವ ನಿಸರ್ಗದ ರಮಣೀಯ ತಾಣಗಳಲ್ಲಿ ಪ್ರಮುಖವಾದದ್ದೆಂದರೆ :

1) ಕನ್ನಂಬಾಡಿ ಕಟ್ಟೆ (ಕೃಷ್ಣರಾಜಸಾಗರ)
2) ಮೇಕೆದಾಟು
3) ಹೋಗೆನಕಲ್ ಫಾಲ್ಸ್
4) ರಂಗನತಿಟ್ಟು
5) ಶಿವನ ಸಮುದ್ರ
6) ತಂಜಾವೂರು

7) ತಲಕಾಡು

1) **ಕನ್ನಂಬಾಡಿಕಟ್ಟೆ (ಕೃಷ್ಣರಾಜಸಾಗರ)** :- ಈ ಸ್ಥಳ ಮಂಡ್ಯ ಜಿಲ್ಲೆಯೊಳಗೆ ಇದೆ ಇಲ್ಲಿ ಕಾವೇರಿ ನದಿ ವಿಶೇಷವಾಗಿ ಹರಿಯುವ ಕಾರಣದಿಂದ ಈ ನದಿಗೆ ಕೃಷ್ಣರಾಜಸಾಗರ ಅಣೆಕಟ್ಟನ್ನು ಕಟ್ಟಲಾಗಿದ್ದು ಬಹು ಪ್ರಸಿದ್ಧ ಪಡೆದಿದೆ. ಇಲ್ಲಿ ಲೋಕವಿಖ್ಯಾತವಾದ ಬೃಂದಾವನವಿದೆ. ಕನ್ನಂಬಾಡಿಕಟ್ಟೆಗೆ ಹೊಂದಿಕೊಂಡಂತೆ ಶ್ರೀ ಕಾವೇರಿ ಮಾತೆಯ ಶಿಲಾವಿಗ್ರಹವನ್ನು ಕಡೆದು ಪ್ರತಿಷ್ಠಾಪನೆ ಮಾಡಲಾಗಿದೆ. ಕಾವೇರಿಯು ಹಿಡಿದ ಕೊಡಪಾನದಲ್ಲಿ ನೀರು ಸಣ್ಣದಾಗಿ ಬೀಳುತ್ತಿರುತ್ತದೆ ದಿನನಿತ್ಯ ಪೂಜೆ ನಡೆಯುತ್ತದೆ.

ಇಲ್ಲಿ ಕನ್ನಂಬಾಡಿಕಟ್ಟೆ, ಕಾವೇರಿ ನಿಂತ ವಿಶಿಷ್ಟತೆ, ಬೃಂದಾವನ, ಪ್ರವಾಸಿಗರ ನೂಕುನುಗ್ಗಲು, ಹಸಿರಿನ ಆಕರ್ಷಣೀಯ ಒಟ್ಟಾರೆಯಾಗಿ ಸುಖ, ಶಾಂತಿ, ನೆಮ್ಮದಿ ತರುವ ಸ್ಥಳವಾಗಿವೆ.

2) **ರಂಗನ ತಿಟ್ಟು** :-_ ಶ್ರೀ ರಂಗಪಟ್ಟದ ಸಮೀಪವಿರುವ ಈ ಸ್ಥಳ ಪ್ರಮುಖ ಆಕರ್ಷಣೀಯ ಪಕ್ಷಿಧಾಮವಾಗಿದೆ. ಕನ್ನಂಬಾಡಿಕಟ್ಟೆಯಿಂದ ಮುಂದೆ ಪೂರ್ವಾಭಿಮುಖವಾಗಿ ಸಾಗಿ ಸುಮಾರು 4 ಕಿ.ಮೀ. ಇರುವ ಬಲಮುರಿಗೆ ಬರುವಳು ಇಲ್ಲಿ ಶಿವದೇವಾಲಯವಿದೆ. ಇಲ್ಲಿ ಮುಂದೆ ತಲುಪುವ ಸ್ಥಳವೇ ಪಕ್ಷಿಧಾಮ, ಇಲ್ಲಿ ಕಾವೇರಿ ಮಾತೆ ಸಮನಾಂತರವಾಗಿ ಹರಿಯದೇ ಅಲ್ಲಲ್ಲಿ ಏರಿಳಿತಗಳಲ್ಲಿ ನಡೆಯುವಳು. ಬಂಡೆಗಳು ಹಾಗೂ ಮರಳಿನಿಂದ ಕೂಡಿದ ದ್ವೀಪಗಳು ನಿರ್ಮಿಸಿದ್ದಾಳೆ. ಕೆಲ ದ್ವೀಪಗಳಲ್ಲಿ ಮರ ಗಿಡಗಳು ಬೆಳೆದು ನಿಂತಿದ್ದು ಪಕ್ಷಿಗಳಿಗೆ ಆಶ್ರಯ ತಾಣವಾಗಿದೆ. ವಸಂತಕಾಲದಲ್ಲಿ ದೇಶ-ವಿದೇಶಗಳ ಬೇರೆ, ಬೇರೆ ಕಡೆಯಿಂದ ಬರುವ ಭಿನ್ನ-ವಿಭಿನ್ನ ಜಾತಿಯ, ಬಣ್ಣ-ಬಣ್ಣದ ಹಕ್ಕಿಗಳು ಸೇರಿ ರಂಗನ ತಿಟ್ಟಿನಲ್ಲಿನ ನದಿ ನೀರ ಮೇಲೆ, ಮರಗಳ ಮೇಲೆ ಚಿತ್ತಾರಗಳನ್ನ ನಿರ್ಮಿಸಿ, ನಿಸರ್ಗವನ್ನ ಕಲಾ ಕೃತಿಯಿಂದ ನಿಸರ್ಗವೇ ತುಂಬುವ ಅತ್ಯದ್ಭುತ ಸನ್ನಿವೇಶ ಇಲ್ಲಿ ಕಾಣಬಹುದು, ಕಣ್ಣಿನೊಂದಿಗೆ, ಕಿವಿಯನ್ನು ತಣ್ಣಿಸುವ ವಲಸೆ ಹಕ್ಕಿಗಳ ಕಲರವನಾದ ಮನಮೋಹಕವಾದದ್ದು, ಇದರೊಂದಿಗೆ ಮಾನವ ನಿರ್ಮಿತವಾದ ನೈಸರ್ಗಿಕ ಅಲಂಕಾರವೆಂದರೆ ನದಿಯ ಮೇಲೆ ತೇಲುವ ಬಣ್ಣದ ದೋಣಿಗಳ ವ್ಯವಸ್ಥೆ, ಆರಾಮವಾಗಿ ಕುಳಿತು ಈ ಸೌಂದರ್ಯ ಸವಿಯಲು ಕೊರದ ಕಲ್ಲುಗಳು ಹೀಗೆ ಚಿಣ್ಣದ ಬೆಟ್ಟವೆಂದೇ ಹೆಸರಾದ (ರಂಗ-ಬಣ್ಣ+ತಿಟ್ಟು-ಬೆಟ್ಟ-ದಿಣ್ಣೆ) ರಂಗನತಿಟ್ಟು ಕಾವೇರಿ ನಿರ್ಮಿಸಿದ ಸುಂದರವಾದ ಆಕರ್ಷಣೀಯವಾದ ಪ್ರೇಕ್ಷಣೀಯ ಸ್ಥಳವಾಗಿದೆ.

3) **ತಲಕಾಡು** :- ಕಾವೇರಿ ಕಪಿಲೆಯನ್ನು ತನ್ನ ಒಳಗೆ ವಿಲೀನಿಕರಿಸಿಕೊಂಡು ಮಂಡ್ಯ, ಮೈಸೂರು ಜಿಲ್ಲೆಗಳನ್ನು ದಾಟಿ ಬಂದು ಸೇರುವ ಸ್ಥಳವೇ ಇತಿಹಾಸ ಪ್ರಸಿದ್ಧ

ಭೂಪ್ರದೇಶವಾದ ತಲಕಾಡು, ಅನೇಕ ರಾಜರು ಆಳಿದ ನಾಡಾದ ಇಲ್ಲಿ ಕಾವೇರಿ ಸುವರ್ಣಾವತಿಯೊಂದಿಗೆ ಸಂಗಮವಾಗುವಳು ತಲಕಾಡಿನಲ್ಲಿ ಕಾವೇರಿ ನದಿಗೆ ಅಡ್ಡಲಾಗಿ ಅಣ್ಣೆಕಟ್ಟನ್ನು ಕಟ್ಟಲಾಗಿದೆ. ಎಲ್ಲೆಂದರಲ್ಲಿ ಮರಳುಗಾಡು, ಮಧ್ಯ-ಮಧ್ಯ ಒಂದೊಂದು ಹಸಿರು ಗಿಡಗಳು ನೋಡಲು ತುಂಬಾ ಆಕರ್ಷಣೀಯವಾಗುವಂತೆ ಕಾವೇರಿ ಸುಂದರವಾದ ಸ್ಥಳವನ್ನಿಲ್ಲಿ ನಿರ್ಮಿಸಿದ್ದಾಳೆ. ಅಲ್ಲದೆ ವ್ಯವಸಾಯಕ್ಕೂ ಬೆನ್ನೆಲುಬಾಗಿ ನಿಂತಿದ್ದಾಳೆ.

4) **ಶಿವನಸಮುದ್ರ** – ದೇಶದಲ್ಲೆ ಮೊಟ್ಟ ಮೊದಲ ಬಾರಿಗೆ ವಿದ್ಯುತ್ ಉತ್ಪಾದನೆ ಮಾಡಿದಂತಹ ಸ್ಥಳವೇ ಈ ಶಿಂಸ ಅಥವಾ ಶಿವನಸಮುದ್ರ ತಲಕಾಡಿನಿಂದ ಪೂರ್ವಾಭಿ ಮುಖವಾಗಿ ಕೊಳ್ಳೆಗಾಲ, ಸತ್ಯಗಾಲಗಳಲ್ಲಿ ಇಂಪಾಗಿ ಹರಿಯುತ್ತಾ ಎರಡು ಕವಲುಗಳಾಗಿ ಒಡೆದು ಮಧ್ಯ ದ್ವೀಪ ನಿರ್ಮಾಣ ಮಾಡಿದ ಸ್ಥಳ ನಯನ ಮನೋಹರವಾದದ್ದು, ಅದುವೇ ಶಿವನಸಮುದ್ರ ಇಲ್ಲಿ ಕಾವೇರಿ ಎತ್ತರದಿಂದ ಪಾತಳಕ್ಕೆ ಬೀಳುವಾಗ ಸೃಷ್ಟಿಸುವ ಬಿಳಿಬುಗ್ಗೆಗಳು, ಹೊಗೆ ಎಲ್ಲವೂ ಸೃಷ್ಟಿಯ ವೈಶಿಷ್ಟವೆನಿಸುತ್ತದೆ ಇವುಗಳಲ್ಲಿಯ ಒಂದು ಕವಲನ್ನು ಗಗನಚುಕ್ಕಿ ಎಂತಲ್ಲೂ ಇನ್ನೊಂದನ್ನ ಭರಚುಕ್ಕಿ ಎಂತಲೂ ಜನಪದರಲ್ಲಿ ಪ್ರಸಿದ್ಧಿಯನು ಪಡೆದಿವೆ ಎಂಬುದು ಕಾಣಬಹುದು. ಹೀಗೆ ಬೆಟ್ಟ, ಗುಡ್ಡ, ಹಸಿರು ಮರಗಳು, ಭೋರ್ಗರೆಯುತ್ತಾ ಧುಮ್ಮಿಕ್ಕಿ ಪ್ರಪಾತಕ್ಕಿಳಿಯುವ ಕಾವೇರಿಯಿಂದ ನಿರ್ಮಿತವಾದ ನಿಸರ್ಗದ ಮಡಿಲು ಎಂಥ ಅರಸಿಕರ ಹೃದಯವನ್ನು ಸೆಳೆಯಬಲ್ಲದು.

5) ಮೇಕೆದಾಟು :– ಮೇಕೆದಾಟು ಎಂದೊಡನೆ ಅದೇನೆಂದು ನೋಡುವ ಕೇಳುವ ಆಸಕ್ತಿ, ಕುತೂಹಲ ಚಿಗುರುವ ಮನಸ್ಸುಗಳಿಗೆ ನಿರಾಶೆ ಮಾಡದೆ ತನ್ನ ಹೆಸರಿಗೆ ತಕ್ಕಂತೆ ವೈಶಿಷ್ಟ್ಯತೆಯ ಸೌಂದರ್ಯ ನಿರ್ಮಿಸಿದ ಈ ಸ್ಥಳಕ್ಕೆ ಕರ್ನಾಟಕದಲ್ಲಿ ತನ್ನ ಹರಿಯುವಿಕೆಯಿಂದ ಅಲ್ಲಿನ ಭೌಗೋಳಿಕ ಎಲ್ಲೆಯನ್ನು ಕಡಿದುಕೊಂಡು ಸಾಗುವಾಗ [ತಮಿಳುನಾಡಿನ ಭೂಭಾಗದಲ್ಲಿ ತಣ್ಣಗೆ ಹರಿಯುವ ಪ್ರದೇಶ] ವೇಗ ನಿಯಂತ್ರಿಸಲಾರದಷ್ಟು ವೇಗದಿಂದ ನಿರಂತರವಾಗಿ ಭೋರ್ಗರೆಯುತ್ತಾ ಹರಿಯುವಾಗ ಕಲ್ಲು ಬಂಡೆಗಳು ಸವೆದು ಸವೆದು ಚಿಕ್ಕ ಪುಟ್ಟ ಗಾತ್ರಕ್ಕೆ ಬಂದಿರುತ್ತವೆ. ಅಲ್ಲಿ ಅತಿ ದೊಡ್ಡ ಬೆಟ್ಟವನ್ನು ಸೀಳಿಕೊಂಡು ಮುನ್ನುಗ್ಗವಾಗ ಅತ್ಯಂತ ಪಾತಾಳಕ್ಕೆ ಬಿದ್ದು, ತುಂಬಾ ಚಿಕ್ಕದಾದ ಗಾತ್ರದಲ್ಲಿ ಹರಿಯುತ್ತಾಳೆ. ಅಲ್ಲಿ ನಿಂತು ನೋಡಿದರೆ ಸಾಧು ಪ್ರಾಣಿಯಾದ ಕುರಿಯು ನದಿಯನ್ನು ದಾಟುತ್ತದೆನಿಸುತ್ತದೆ. ಅತ್ಯಂತ ವಿಶಾಲವಾಗಿ ಹರಿದ ಅವಳು ಎಷ್ಟೊಂದು ಚಿಕ್ಕದಾಗಿ ಹರಿಯುತ್ತಿದ್ದಾಳೆಂದು ಆಶ್ಚರ್ಯವಾಗುತ್ತದೆ. ಅದಕ್ಕೆ ಕಾವೇರಿ ಹರಿಯುವ ಸಿಳಾಲಿಗೆ ಮೇಕೆದಾಟೆಂದೇ ಕರೆಯುವರು ಈ ಮೇಕೆದಾಟು ನೋಡಲು ಎಷ್ಟು ಅದ್ಭುತವೋ ಅಷ್ಟೇ ರೌದ್ರಾವತಾರ ತಾಳಿದೆ. [ಸೌಂದರ್ಯದ ಮಡಿಲಲ್ಲಿ ಅಪಾಯವನ್ನಡಗಿದೆ ಎನ್ನಬಹುದು]

**6) ಹೋಗೆನಕಲ್ ಫಾಲ್ಸ್ :-** ಮೇಕೆದಾಟುವಿನಿಂದ ಸುಮಾರು 45 ಕಿ.ಮೀ. ದೂರಕ್ಕೆ ನಡೆದಾಗ ಕಾವೇರಿ ಕನ್ನಡ ನಾಡಿನಿಂದ ತಮಿಳಿಗೆ ಪ್ರಯಾಣ ಬೆಳೆಸಿ, ಧರ್ಮಪುರಿ ಜಿಲ್ಲೆಯಲ್ಲಿ ದಿಂಬಾಗಿ ಹರಿಯುತ್ತಾ ಇಲ್ಲಿ ಬಹು ಎತ್ತರದಿಂದ ಹಳ್ಳಕ್ಕೆ ಬೀಳುವಳು ಅದನ್ನೆ ಹೋಗೆನಕಲ್ ಫಾಲ್ಸ್‌ಯೆಂದು ಕರೆಯುವರು, ಇಲ್ಲಿಯೂ ನೀರು ಮೇಲಿಂದ ಕೆಳಗೆ ಬೀಳುವ ರಭಸ ಹಳ್ಳ, ದಿಣ್ಣೆ, ಕಾಡು, ಅದರ ಹಸಿರ ಸಿರಿಯೆಲ್ಲ ತಮಿಳರಿಗೆ ಕಾವೇರಿ ನೀಡಿದ ಮೊದಲ ಸುಂದರವಾದ ನಿಸರ್ಗ ಸಿರಿ ಇದಾಗಿದೆ. ಹಾಗಾಗಿ ಇದೊಂದು ಪ್ರವಾಸಿಗರ ಪ್ರಸಿದ್ಧ ಆಕರ್ಷಣೀಯ ನೆಲೆವಿಡಾಗಿದೆ.

7) ತಂಜಾವೂರು :- ಸಂಸ್ಕೃತಿಯ ಸಿರಿಮಾತೆಯಾದ ಕಾವೇರಿ ತಮಿಳು ನಾಡಿನಲ್ಲೂ ಗೌರವ ಪೂಜೆಗಳನ್ನು ಪಡೆದಿದ್ದಾಳೆ ಆಕೆ ಧರ್ಮಪುರಿಯಲ್ಲಿ ಚಿಣ್ಣಾರ್ ನದಿಯನ್ನು ಸೇರಿ ಮುಂದೆ ಭವಾನಿ, ಅಮೃತರೊಂದಿಗೆ ಕಾವೇರಿ ಸೇರಿ ಮೂವರ ಸಂಗಮವಾಗುವುದು. ಹೀಗೆ ಮುಂದೆ ನಡೆದ ಆಕೆಯು ಕೊಯಂಬತ್ತೂರು ಜಿಲ್ಲೆಯ ತಿರುಮಕೂಡಲ್ ಹತ್ತಿರದಲ್ಲಿ ಅಮರಾವತಿ ನದಿಯೊಂದಿಗೆ ಸೇರಿ ತುಂಬಾ ವಿಶಾಲವಾಗಿ ಹರಿಯುತ್ತಾ ಇಬ್ಭಾಗವಾಗುವಳು ಒಂದು ಕವಲು ಕಾವೇರಿ ಕವಲು ಕೊಲ್ಲಡಂ ಎಂದು ಕರೆಯಿಸಿ ಕೊಳ್ಳುವ ಆಕೆಯ ಹರಿವು ರಮ್ಯ ಮನೋಹರ, ಆಕರ್ಷಕ, ಅವೆರಡರ ನಡುವಿನ ಭೂಪ್ರದೇಶ ದ್ವೀಪವಾಗಿ ಮಾರ್ಪಟ್ಟು ಇದ್ದ ಆಕರ್ಷಣೆಗೆ ಇನ್ನಷ್ಟು ಮೆರಗು ತಂದಿದೆ. ಕಾವೇರಿಯ ಒಂದು ಭಾಗವಾದ ಕೊಲ್ಲಂ ತಂಜಾವೂರನ್ನು ತಾಗಿಕೊಂಡು ಚಿಂಗಲ್‌ಪೇಟ್ ಬಳಿ ದೇವಿಕೋಟೆಗೆ ಬಂದಾಗ ಅಲ್ಲಿ ಬಂಗಾಳ ಸಮುದ್ರದಲ್ಲಿ ಬೆರೆಯುವಳು.

ಇವಳ ಇನ್ನೊಂದು ಕವಲೇ ತಂಜಾವೂರಿಗೆ ಮೆರಗು ತಂದದ್ದು, ಕಾವೇರಿಯಿಂದಾಗಿ ತಂಜಾವೂರು ಹಸಿರು ಬನಸಿರಿಯ ಸೃಷ್ಟಿ ತಾಣವಾಗಿದೆ ಕೃಷಿಕ ಜೀವದ ಜೀವಾಳವಾಗಿದ್ದಾಳೆ.

ಕಾವೇರಿಯ ಹರಿಯುವಿಕೆಯಿಂದ ನಿಸರ್ಗದ ರಮಣೀಯ ತಾಣಗಳು ಒಂದೋ ಎರಡು ಎಣಿಸಿ ಹೇಳಲಿಕ್ಕಾಗದು ಅವಳು ಎಲ್ಲೆಲ್ಲಿ ಹರಿಯುವಳೋ ಅಲ್ಲೆಲ್ಲಾ ಗುಡಿಗೋಪುರಗಳು ಜನ್ಮ ತಾಳಿವೆ. ಹಸಿರಿನ ಬನಸಿರಿಯ ಬಯಲುಗಳು ತೋಪುಗಳು ಹಸಿರಾಗಿರುವ ಕಣಿವೆಗಳು ಉಯ್ಯಾಲೆ ಆಡುವ ವಿಶಾಲವಾದ ಪೈರಿನ ಗದ್ದೆಗಳು ಗಿರಿಶಿಖರಗಳು ಬೆಟ್ಟಗುಡ್ಡಗಳು ಎಲ್ಲವು ಸೃಷ್ಟಿಯಾಗಿ ನಿಂತಿದೆ. ಇದಕ್ಕೆ ಇನ್ನಷ್ಟು ಮೆರೆಗು ನೀಡಲು ಜನಪದರ ಕಲೆ ಸಂಪ್ರದಾಯ ಆಚಾರ-ವಿಚಾರಗಳು ತಲೆ ಎತ್ತಿನಿಂತಿವೆ. ಈ ನಿಸರ್ಗದ ಮಡಿಲಿನಲ್ಲಿ ಜನರು, ಭೂಪ್ರದೇಶ, ಪ್ರಾಣಿ ಪಕ್ಷಿಗಳು ಸುಖ ಜೀವನ ನಡೆಸುತ್ತಿವೆ.

ಕಾವೇರಿ ಜನರಿಗೆ ದೇಹದ ಶಕ್ತಿಗಾಗಿ ಆಹಾರ ಮನತೃಪ್ತಿಗಾಗಿ ಕಣ್‌ತಣಿಯುವಷ್ಟು ಸೌಂದರ್ಯ, ಪ್ರಾಣಿ, ಪಕ್ಷಿಗಳಿಗೆಲ್ಲವೂ ಆಶ್ರಯ ನೀಡಿದ್ದಾಳೆ.

## ಡಿ) ಜಾನಪದ ಬನಸಿರಿ – ವಿಭಿನ್ನಧಾರೆಗಳ ನೆಲೆಯಲ್ಲಿ

ಜಾತ್ರೆಗಳು ಜನಪದರ ಆಚಾರ–ವಿಚಾರ, ರೀತಿ–ನೀತಿ, ಸಾಮಾಜಿಕ ಸಂಬಂಧ ಸಂಪ್ರದಾಯ–ನಂಬಿಕೆ, ಆರ್ಥಿಕ, ಸಾಂಸ್ಕೃತಿಕ, ಧಾರ್ಮಿಕ ಅಂಶಗಳ ಒಂದು ತೋಟವಾಗಿದೆ. ಆ ಒಂದು ತೋಟದ ಭಿನ್ನ–ವಿಭಿನ್ನ ಸಸಿ–ಹೂಗಳಿಂದ ಕಂಗೊಳಿಸುತ್ತಿರುತ್ತದೆ. ಯಾವಾಗ ಜನಪದರು ವರ್ಷವಿಡೀ ದುಡಿದು ಸುಗ್ಗಿಯ ಸಂಭ್ರಮವನ್ನ ಮುಗಿಸಿ ಕೆಲಸವಿಲ್ಲದೆ ವಿಶ್ರಾಂತೀಯಲ್ಲಿರುತ್ತಾರೆ. ಆಗ ಎಲ್ಲರೂ ಜಾತಿ–ಭೇದ, ಲಿಂಗ–ಭೇದ, ಮೇಲು–ಕೀಳೆಂಬ, ಬಡವ ಬಲ್ಲಿದನೆಂಬ ತಾರತಮ್ಯವನ್ನೆಲ್ಲ ಬಿಟ್ಟು ಊರಿನ ದೇವತೆಯ ಸಮ್ಮುಖದಲ್ಲಿ ಸೇರಿ ಈ ಜಾತ್ರೆಗಳನ್ನು ಒಂದು ದಿನದಿಂದ ಐದು ದಿನಗಳವರೆಗೆ ನಡೆಸುತ್ತಾರೆ. ಇದು ಪ್ರಮುಖವಾಗಿ ಧಾರ್ಮಿಕ ನಂಬಿಕೆ, ವ್ಯಾಪಾರದ ದೃಷ್ಟಿಕೋನ, ಸುವ್ಯವಸ್ಥಿತವಾದ ಸಾಮಾಜಿಕ ಸಂಬಂಧಗಳನ್ನೇರ್ಪಡಿಸಲು ಏರ್ಪಟ್ಟಿರುತ್ತದೆ. ಈ ಸಂದರ್ಭದಲ್ಲಿ ಅನೇಕ ಜನಪದ ಕಲೆಗಳು ಪ್ರದರ್ಶಿತವಾಗುತ್ತದೆ. ಹೀಗೆ ಜಾತ್ರೆಗಳು ಜನಪದ ಸಂಸ್ಕೃತಿಯ ಒಟ್ಟು ಸಂಪತ್ತನ್ನು ಹೊತ್ತು ನಿಲ್ಲುವ ಆಯಾಮ (ತಾಣ)ಗಳಾಗಿವೆ.

ಪ್ರತಿ ವರ್ಷಕ್ಕೊಮ್ಮೆ ಆಚರಿಸುವ ಜಾತ್ರೆಗಳು ದೇವರ ಹೆಸರಿನಲ್ಲಿಯೋ ಅಥವಾ ಯಾವುದೇ ಪವಾಡ (ದೇವತಾ) ಪುರುಷನ ಹೆಸರಿನಲ್ಲಿಯೋ ನಡೆಯುತ್ತವೆ. ಜಾತ್ರೆಗಳು ಊರಿನಿಂದ ಊರಿಗೆ ಕಾಲದಿಂದ ಕಾಲಕ್ಕೆ ವಿಭಿನ್ನವಾಗಿ ಆಚರಿಸಲ್ಪಡುತ್ತವೆ. ಆದರೂ ಎಲ್ಲಾ ಸಮಾಜದಲ್ಲಿ ಇವುಗಳ ಆಶಯ ಒಂದೇ ಜನರಲ್ಲಿರುವ ಎಲ್ಲಾ ರೀತಿಯ ಭೇದಗಳನ್ನು ಮರೆತು ಎಲ್ಲರೂ ಒಂದೆಡೆ ಸೇರಿ ಸಾಮಾಜಿಕ ಸಮಾನತೆಯನ್ನು ಕಾಪಾಡಿಕೊಂಡು ಸಾಮಾಜಿಕ ಬಾಂಧವ್ಯಗಳನ್ನು ಗಟ್ಟಿಗೊಳಿಸಿಕೊಳ್ಳುತ್ತಾರೆ. ಇಲ್ಲಿ ಎಲ್ಲರೂ ತಮ್ಮ ಕೈಲಾದ ಮಟ್ಟಿಗಿನ ಭತ್ಯೆಯನ್ನು (ಹಣ ಅಥವಾ ಧಾನ್ಯಗಳ ರೂಪದಲ್ಲಿ ) ಕೊಡುವುದರ ಜೊತೆಗೆ ಒಂದಲ್ಲ ಒಂದು ಕೆಲಸವನ್ನು ವಹಿಸಿಕೊಂಡು ಅದು ದೇವರಿಗೆ ಸಲ್ಲಿಸುವ ನೀವೆಯೆಂದು ತಿಳಿದು ಶೃದ್ಧಾಪೂರ್ವಕವಾಗಿ ಇಚ್ಛಾಶಕ್ತಿಯಿಂದ ನೇರವೇರಿಸುತ್ತಾರೆ.

**ಜಾತ್ರೆ ಅಂದು–ಇಂದು** :– ಒಂದು ಸಂಸ್ಕೃತಿಯನ್ನು ಅರ್ಥಮಾಡಿಕೊಳ್ಳುವುದಕ್ಕೆ ಸೂಕ್ತ ಮಾಹಿತಿಯನ್ನು ಒದಗಿಸುವ ಜಾನಪದ ಸಂಸ್ಕೃತಿಯು ರೂಪಿಸಿಕೊಂಡ ಸುಪ್ತ ಪ್ರಜ್ಞೆಯ ವ್ಯಕ್ತರೂಪವಾಗಿದೆ. ಈ ಸುಪ್ತ ಪ್ರಜ್ಞೆಯಲ್ಲಿ ಅಡಕವಾಗಿರುವ ಸಮಷ್ಟಿ ಅನುಭವಗಳನ್ನು ಬಹುರೂಪಿ ಪ್ರವೃತ್ತಿಯಲ್ಲಿ ಅನಾವರಣಗೊಳಿಸುತ್ತಾ ಜಾನಪದವು ತನ್ನ ಸಮಷ್ಟಿ ಚಹರೆಯನ್ನು ಜಾತ್ರೆಗಳ ಮುಖಾಂತರವಾಗಿ ಬಿಂಬಿಸುವುದನ್ನು ನೋಡಬಹುದು. ಜಾನಪದರ ಬಹು ಸಂಸ್ಕೃತಿ ಧರ್ಮ, ಆರ್ಥಿಕ ಪರಿಸ್ಥಿತಿ, ಸಾಮಾಜಿಕ ಬಾಂಧವ್ಯ ಅವರ ಕಲಾ ಕೌಶಲ್ಯ ಇವೆಲ್ಲವುಗಳನ್ನ ಏಕಕಾಲದಲ್ಲಿ ಕಾಣಸಿಗುವುದು ಜಾತ್ರೆಗಳಲ್ಲೆ, ಹೀಗೆ ಒಟ್ಟು ಜೀವನದ ಪ್ರತೀಕವಾಗಿ ನಿಲ್ಲುವಂತಹವು, ಕಾಲಘಟ್ಟಗಳು ಉರುಳಿ ಹೋದಂತೆ, ಹೊಸ ಹೊಸ ಅಂಶಗಳು ಜಾನಪದದ ಮೇಲೆ ಪ್ರಭಾವ ಬೀರಿದಂತೆ ವರ್ತಮಾನದ

ಸನ್ನಿವೇಶಗಳು ಬದಲಾದಂತೆ ಬಾಹ್ಯಿಕ ಜಾನಪದ ಜಿವನದ ಬೇರೆ ಬೇರೆ ರೂಪಪಡೆಯುತ್ತಿದೆ. ಅಲ್ಲಿನ ಸಂಸ್ಕೃತಿ ಬೇರೆ ಬೇರೆ ರೀತಿಯಲ್ಲಿ ಬೇರೆ ಬೇರೆಡೆ ಗುರುತಿಸಿಕೊಂಡರೆ, ಇನ್ನ ಕೆಲವೆಡೆ ಅದು ಮರಿಚಿಕೆಯಂತೆ ಕಾಣಸಿಗುತ್ತದೆ. ಮುಖದಲ್ಲಿ ಆದ ಬದಲಾವಣೆಯನ್ನೆ ಕನ್ನಡಿಯೂ ಪ್ರದರ್ಶಿಸುವಂತೆ" ಈ ಬದಲಾದ ಜಾನಪದ ಸಂಸ್ಕೃತಿಯ ಛಾಪು ಜಾತ್ರೆಗಳ ಮೇಲೂ ಬಿದ್ದು ಅವುಗಳಲ್ಲೂ ವಿಭಿನ್ನತೆ ಸ್ಪಷ್ಟವಾಗಿ ಎದ್ದು ಕಾಣುತ್ತಿದೆ.

ಯಾವುದೋ ಒಂದು ಸಂದರ್ಭದಲ್ಲಿ ಯಾವುದೇ ಒಂದು ನಂಬಿಕೆಯ ಹಿನ್ನಲೆಯಲ್ಲಿ ಸಣ್ಣ ಪ್ರಮಾಣದಲ್ಲಿ ಒಂದು ಸ್ಥಳದಲ್ಲಿ ಆರಂಭಗೊಂಡಿರಬಹುದಾದ ಜಾತ್ರೆಯ ಆಚರಣೆ ಯಾವುದೇ ಒಂದು ಹಂತದಲ್ಲಿ ಇಡೀ ಜಾನಪದ ಸಮಾಜವನ್ನು ಆವರಿಸಿಕೊಂಡಿತು (ಸಮಾಜದಲ್ಲಿ ಪಸರಿಸಿತ್ತು) ಹೀಗೆ ಪರಂಪರಾಗತವಾಗಿ ನಡೆದು ಬಂದ ಜಾತ್ರೆ ಜಾನಪದದಿಂದ ಬೇರ್ಪಡಿಸಿ ನೋಡಲಾಗದ ಸಂದರ್ಭಕ್ಕೆ ಬಂದು ಇಳಿದವು ಇವುಗಳಲ್ಲಿನ ನಂಬಿಕೆ ಇನ್ನು ಗಾಢವಾಯಿತು. ಆಚರಣೆಗೆ ಹೆಚ್ಚಿನಮೆರಗು ಬಂತು (ಆಚರಣೆ ಹೆಚ್ಚು ವೈಭವಯುತವಾಗಿ ಜರುಗುತ್ತಾ ನಡೆದವು). ಮನುಷ್ಯನ ಜೀವನವೆಲ್ಲಾ ಕೃಷಿಯ ಮೇಲೆ ಅವಲಂಬಿತವಾಗಿದ್ದು, ಆ ಕೃಷಿ ಮಳೆಯಾಧಾರಿತವಾಗಿತ್ತು, ಆದರಿಂದ ಅವರು ಆರು ತಿಂಗಳುಗಳ ಕಾಲ ಹೊಲದ ಕೆಲಸದಲಿ ಮತ್ತು ಕೃಷಿಯಾಧಾರಿತ ಕರಕುಶಲ ಕಲೆಗಳಲ್ಲಿ ತಮ್ಮನ್ನು ತಾವು ಕಿಂಚಿತ್ತು ಬಿಡುವಿಲ್ಲದಂತೆ ತೊಡಗಿಸಿಕೊಂಡು, ಶ್ರಮಪಟ್ಟು ಕೆಲಸ ಮಾಡುತ್ತಿದ್ದರು, ಆ ಹೊತ್ತಿನಲ್ಲಿ ಅವರಿಗೆ ಬೇರೆ Entertinment, shopping, Functions ಗಳಲ್ಲಿ ತೊಡಗಿಸಿಕೊಳ್ಳಲು ಅವರಿಗೆ ಕೆಲಸದ ಬಿಡುವು ಇರಲಿಲ್ಲ, ಬೆಳೆ ರಾಶಿಯಾಗದೆ ಕೈಯಲ್ಲಿ ಹಣವು ಇರಲಿಲ್ಲ ಅದಕ್ಕೆ ಮೂಕ ಪ್ರಾಣಿಗಳಂತೆ ದುಡಿಯುವುದು, ಊಟ ಮಾಡುವುದು, ದಿನವೆಲ್ಲಾ ದುಡಿದ ದೇಹಕ್ಕೆ ವಿಶ್ರಾಂತಿ ಕೊಡಲು ಅರೆಬರೆ ನಿದ್ರೆ ಮಾಡುವುದು ಇಷ್ಟೆ ಅವನ ಜಿವನವಾಗಿರುತ್ತದೆ. ಆದರೆ ಬೆಳೆ ಕೈಗೆ ಬಂದು ರಾಶಿಯಾಯಿತೆಂದರೆ "ಕೈಯಲ್ಲಿ ಝಣ ಝಣ ಕಾಂಚಣ, ಹೊಲದಲ್ಲಿ ಕೆಲಸವಿಲ್ಲದೆ ಭಣಭಣ" ಅದಕ್ಕಾಗಿ ಆತ ತನ್ನ ಸಮಯವನ್ನು ಸಮಾರಂಭ ಸಂತೋಷದ ಆಚರಣೆಯಲ್ಲಿ ಕಳೆಯುತ್ತಿದ್ದ. ಅದಕ್ಕೆನೆ ಮದುವೆಗಳು, ಜಾತ್ರೆಗಳು ಜರುಗುತ್ತಿದ್ದುವು ಬೇಸಿಗೆ ದಿನಗಳಲ್ಲಿ ಹಳ್ಳಿಗಳಿಂದ – ಪಟ್ಟಣಗಳಿಗೆ ಹೋಗಿ ಗೃಹೋಪಯೋಗಿ ಸಾಮಾನುಗಳನ್ನ ತರುವುದು ತನ್ನ ಹೊಲದಲ್ಲಿ ಬೆಳೆದ ಬೆಳೆಯನ್ನು ಮಾರಲು ದೂರದ ಊರಿಗೆ ಆಗಾಗ ಹೋಗಲು ಇಂದಿನಂತೆ ಸಾರಿಗೆ – ಸಂಪರ್ಕಗಳ ವ್ಯವಸ್ಥೆ ಆಗಿರಲಿಲ್ಲ. ಆಗ ಒಂದು ಊರಿನಿಂದ ಇನ್ನೊಂದು ಊರಿಗೆ ಹೋಗಬೇಕೆಂದರೆ ಹೆಚ್ಚು ಕಷ್ಟದಾಯಕವಾಗಿತ್ತು. ಅದಕ್ಕೆ ಒಂದು ಮಾರುಕಟ್ಟೆ ವ್ಯವಸ್ಥೆಯನ್ನು ಜಾತ್ರೆಗಳು ಮೂಲಕ ಏರ್ಪಡಿಸಿದರು.

ಧರ್ಮದ ಹಿನ್ನಲೆಯಲ್ಲಿ ನಡೆಯುವ ಜಾತ್ರೆಗಳು ಹೆಚ್ಚು ಮೂಢನಂಬಿಕೆಗೂ ಅಥವಾ ಅವರವರ ಮನಸ್ಸಿನ ಭಯವನ್ನ ದೂರಸರಿಸುವುದಕ್ಕಾಗಿಯೋ ನಡೆಸುತ್ತಿದ್ದರು. ಹಿಂದಿನ ಕಾಲದಲ್ಲಿ ಇಂದಿನ ವೈಜ್ಞಾನಿಕ ದೃಷ್ಟಿಯ ವೈದ್ಯಕೀಯ ಪದ್ಧತಿಯೂ ಇರಲಿಲ್ಲ ಅದರೆ ಅಲ್ಲಿ ಅನೇಕ ರೀತಿಯಾದ ಭಯಾನಕವಾದ ರೋಗಗಳು ಇದ್ದವು (ಮಹಾಮಾರಿ ಸಿಡುಬು, ಕ್ಷಯ ಇತ್ಯಾದಿ) ಈ ರೋಗಗಳು ಊರ ದೇವರಿಗೆ ಊರಿನವರಿಂದ ಆದ ಅಪಮಾನಗಳಿಂದ ಬಂದಂತಹವು ಇವುಗಳ ಶಮನ ದೇವರ ಕೋಪ ಶಮನವಾದ ಮೇಲೆಯೇ ಅದಕ್ಕಾಗಿ ದೇವರಿಗೆ ಶಾಂತಗೊಳಿಸಲು ಪೂಜೆ ಹರಕೆ ಬಲಿಯನ್ನು ನೀಡಬೇಕು ಎಂದು ತಿಳಿದು ಪ್ರತಿವರ್ಷ ಈ ಜಾತ್ರೆಗಳಲ್ಲಿ ಸಂಭ್ರಮದ ಪೂಜೆಯೊಂದಿಗೆ ಗ್ರಾಮದ ಎಲ್ಲಾ ಮುತ್ತೈದೆಯರು ಮಡಿಯಾಗಿ ಒದ್ದೆ ಬಟ್ಟೆಯಲ್ಲಿ ತಲೆಯ ಮೇಲೆ ಕಳಸ ಹೋರುವುದು ಉರುಳುಸೇವೆ ಮಾಡುವುದು ಮಾಡುತ್ತಿದ್ದರು. ಹಾಗೂ Complesary ಯಾಗಿ ಕುರಿ, ಕೋಳಿ/ಕೋಣಗಳ ಬಲಿಯನ್ನ ಅರ್ಪಿಸುತ್ತಿದ್ದರು.

ಜಾತ್ರೆಗಳಲ್ಲಿ ಜಾನಪದದ ಪ್ರಸಿದ್ಧ ಕಲೆಗಳಾದ ಯಕ್ಷಗಾನ, ದೊಡ್ಡಾಟ, ಕೃಷ್ಣ ಪಾರಿಜಾತ, ತೊಗಲು ಗೊಂಬೆಯಾಟ, ಟೆಂಟ್ ಸಿನಿಮಾಗಳ ಪ್ರದರ್ಶನಗಳನ್ನು ಕೊಡುವುದಕ್ಕಾಗಿ ಬೇರೆ ಬೇರೆ ಊರುಗಳಿಂದ ಕಲಾ ತಂಡಗಳು ಹರಿದು ಬರುತ್ತಿದ್ದವು ಸಂಜೆಯಿಂದ ಮುಂಜಾವಿನವರೆಗೆ (ಇಡೀ ರಾತ್ರಿ) ಈ ಕಲೆಗಳು ಪ್ರದರ್ಶಿತವಾಗುತ್ತಿದ್ದು, ಜನ ಕಣ್ಣ ಮಿಟುಕಿಸದೇ ನೋಡುತ್ತಿದ್ದರು.

ಜಾತ್ರೆಗಳು ಧಾರ್ಮಿಕತೆ ಬೆಳೆಯ ಮಾರುಕಟ್ಟೆಗೆ ಎಷ್ಟು ಅವಶ್ಯಕವಾಗಿದ್ದವೋ ಅಷ್ಟೆ ಮಕ್ಕಳ ಮನೋರಂಜನೆಗೂ ಹೆಣ್ಣು ಮಕ್ಕಳ ಶೃಂಗಾರ ಸಾಧನಗಳ ಖರೀದಿಗೂ ಅಷ್ಟೆ ಪ್ರಮುಖವಾಗಿದ್ದವು ಜಾತ್ರೆಗಳು ಬಂದವೆಯೆಂದರೆ ಹೆಣ್ಣು ಮಕ್ಕಳು ತಮ್ಮ ಆಸೆಯ ಗರಿಗಳನ್ನು ಬಿಚ್ಚಿ ತಂದೆ/ಗಂಡನ ಜೇಬು ಖಾಲಿಗಾಗಿ ಸಿದ್ದರಾದಂತೆಯೇ ಬಳೆಗಳನ್ನ ತೊಡುವುದು. ಹೂವು ಖರೀದಿಸಿ ಮುಡಿಯುವುದು ಮನೆಯ ಅಲಂಕಾರದ ಸಾಮಗ್ರಿಗಳನ್ನ ತಮ್ಮ ದೇಹದ ಸೌಂದರ್ಯ ವರ್ಧಕಗಳನ್ನ ಖರೀದಿಸುವುದು ಹೀಗೆ ದಿನವಿಡೀ ಸುತ್ತಾಡಿದರೂ ಅವರ ಜಾತ್ರೆ ವ್ಯಾಮೋಹ ಮುಗಿಯದು ಆದರೆ ಗಂಡನ ಜೇಬು ಖಾಲಿಯಾಗುತ್ತಿದ್ದಂತೆ ಆತನ ಬೇಜಾರು ಸಾಕು ಮಾಡಿ ಎಷ್ಟು ಅಂತ ತೆಗೆದುಕೊಳ್ಳುತ್ತೀರಿ ಎಂದಾಗ ಆಕೆಗೆ ತುಂಬ ಅಸಮಾಧಾನ ಆಗುವುದನ್ನ ಈ ರೀತಿ ಹೇಳಿದ್ದಾರೆ.

“ಮಕ್ಕಳು ತೋಗೊಂಡು ಮದಿಗಿ ಹೋಗಬಾರದು

ಗಂಡನ ತೊಗೊಂಡು ಜಾತ್ರಿಗ್ ಹೋಗಬಾರದು", ಗಂಡನಿಗಿಲ್ಲಿ ತನ್ನ ದುಡ್ಡೆಲ್ಲಾ ಅವಳು ಆ ಖರೀದಿಗಳಲ್ಲೆ ಸುರಿತ್ತಾಳೆಂಬ ಆತಂಕ ವ್ಯಕ್ತಪಡಿಸಿದ್ದರೆ ಇನ್ನು ಇನ್ನು ಖರೀದಿಸಬೇಕೆಂಬ ಹಂಬಲಕ್ಕೆ ಆತ ತಡೆಯೊಡುತ್ತಾನೆಂದು ಆಕೆಗೆ ಕಳವಳ ಅಂದರೆ ಹೆಣ್ಣು ಮಕ್ಕಳ ಮನಸ್ಸನ್ನು ಹಿಡಿದಿಡುವುದು ಅಂಶ ಜಾತ್ರೆಯಲ್ಲಿ ಒಳಗೊಂಡಿತೆಂಬುದು ಕಾಣಬಹುದು.

ಇನ್ನು ಮಕ್ಕಳಿಗಂತೂ ಹೊಸಲೋಕವನ್ನೆ ತೆರೆದಿಡುವ ಮಾಯಾಬಾಜಾರಾಗಿ ಜಾತ್ರೆಗಳು ಕಾಣುತ್ತಿದ್ದವು. ಮಕ್ಕಳ ಮನೋರಂಜನೆಗಾಗಿ ತೊಟ್ಟಿಲು, ಕಾರು, ಎಲ್ಲಾ ಆಟಗಳಲ್ಲಿ ಅವರು ಸಂತೋಷ ಭಯ, ಕುತೂಹಲ ಎಲ್ಲವು ಅನುಭವಿಸುತ್ತಿದ್ದರು, ಬೊಂಬೆ ಕಾರು, ಅಡಿಗೆ ಸಾಮಾನು, ಬುಗರಿ, ಪೀಪಿ ಮುಂತಾದ ಆಟದ ಸಾಮಾನುಗಳನ್ನು ಹಟಮಾಡಿಯಾದರೂ ಅಪ್ಪ ಅಮ್ಮನಿಗೆ ಖರೀದಿಸಲು ಹಚ್ಚಿ ಬೆಲೂನ್‌ಗಳನಂತು ತಪ್ಪದೆ ತರುತ್ತಿದ್ದರು ಇನ್ನು ಜಾತ್ರೆಗಳಲಿ ಮನೆಗಳಲ್ಲಿ ತಯ್ಯಾರಿಸದಂತಹ ವಿಶೇಷವಾದ, ವಿಶಿಷ್ಟವಾದ ತಿಂಡಿಗಳು ಬರುತ್ತಿದ್ದವು. ಅದರಲ್ಲೂ ಮಕ್ಕಳಿಗೆ ಇಷ್ಟವಾದ ಉಂಡೆ, ಲಾಡು ಇತ್ಯಾದಿ.

ಮೊದಲಾದವು ಅವರನ್ನು ಆಕರ್ಷಿಸುತ್ತಿದ್ದವು, ಅದಕ್ಕಾಗಿ ತಂದೆ ತಾಯಿಗಿಂತ ಮೊದಲು ಜಾತ್ರೆಗಳಲ್ಲಿ ಪಾಲ್ಗೊಳ್ಳಲು ಉತ್ಸುಕರಾಗಿದ್ದರು. ಕೆಲವೊಮ್ಮೆ ಅತಿಯಾದ ಜನಸಂದಣಿಯಿಂದಾಗಿ ಮಕ್ಕಳು ಜಾತ್ರೆಗಳಲ್ಲಿ ತಪ್ಪಿಸಿಕೊಂಡಿದ್ದು ನಂತರ ಕೆಲವು ಮಕ್ಕಳು ತಂದೆ-ತಾಯಿಯರನ್ನು ಸೇರಿದರು, ಇನ್ನು ಕೆಲವರು ಜಾತ್ರೆ ಪ್ರತಿಜಾತ್ರೆಗೊಮ್ಮೆ ನೆನಪಾಗಿ ಕಾಡುತ್ತಿದ್ದರು, ಇಷ್ಟೊಂದು ವಿಶಿಷ್ಟವಾಗಿ ಎಲ್ಲರನ್ನು ಆಕರ್ಷಿಸುವ ಒಂದು ಊರಿನಲ್ಲಿ 5 ದಿನಗಳ ಕಾಲ ನಡೆದರೆ ಇನ್ನೊಂದುರಿನಲ್ಲಿ 9 ದಿನಗಳ ಕಾಲ ಜರುಗುತ್ತಿದ್ದವು. ಪ್ರತಿದಿನವು ದೇವರಿಗೆ ಭಿನ್ನ-ಭಿನ್ನವಾದ ಅಲಂಕಾರ ಮಾಡಿ ಊರಲ್ಲೆಲಾ ಮೆರವಣಿಗೆ ಮಾಡುತ್ತಿದ್ದರು. ಕೊನೆಯ ದಿನ ದೇವರ ಹೆಸರಿನ ರಥವನ್ನು ಎಳೆಯುತ್ತಿದ್ದರು. ಈ ಶುಭ ಮೂರ್ಹತದ ಆರಂಭ ಊರ ಪಟೇಲರಿಂದಲೇ ಆಗುತ್ತಿತ್ತು. ಬ್ರಾಹ್ಮಣರು ಪೂಜಾ ಕಾರ್ಯಗಳಲ್ಲಿ ತೊಡಗಿಸಿಕೊಂಡರೆ ಕ್ಷತ್ರೀಯರು ಪೂಜಾ ವಿಧಿವಿಧಾನಗಳ ಬಗ್ಗೆ, ಇತರ ಕಾರ್ಯಗಳ ನಿಗಾ ವಹಿಸುತ್ತಿದ್ದರು ವೈಶ್ಯರು, ವ್ಯಾಪಾರಗಳಲ್ಲಿ ತೊಡಗಿಸಿಕೊಳ್ಳುತ್ತಿದ್ದರು, ಶೂದ್ರರು ಚೆಪ್ಪಲಿ ಕಾಯುವ ಗ್ರಾಮದ ಬೀದಿ ಗುಡಿಸುವ ಕಾರ್ಯಗಳನ್ನು ಜಾತ್ರೆ ಸಮಯದಲ್ಲಿ ಹಂಚಿಕೊಂಡಂತೆ ನಿರ್ವಹಿಸುತ್ತಿದ್ದರು.

ಕೆಲವರು ಬಡವರು, ಕೆಲವರು ಶ್ರೀಮಂತರಿದ್ದರು ಆ ಭೇದ ಅವರಲ್ಲಿ ಕಾಣುತ್ತಿರಲಿಲ್ಲ. ಉಳ್ಳವರು ಹೆಚ್ಚು ಖರ್ಚು ಮಾಡಿದರೆ ಹೆಚ್ಚು ವಸ್ತುಗಳನ್ನು ಖರಿದಿಸಿದರೆ ಇಲ್ಲದವರು ಕೈಲಾದ ಮಟ್ಟಿಗೆ ದೇವರಿಗೆ ಕಾಯಿ ಕರ್ಪೂರ ಮಾಡಿ, ದೇವರ ದರ್ಶನ ಪಡೆದಾದರೆ, ಸಾಕೆಂದು ಭಾವಿಸುತಾರೆ. ಆದರೆ ಅಲ್ಲಿಗೆ ಹೋಗದೆ ಮನೆಯಲ್ಲಿ ಕೋರಲಾರರು

"ಊರ ಗೂಡ ವುಗಾದಿ

ಜನದ್ ಗೂಡ ಜಾತ್ರೆ"

ಇಂದಿನ ಕಾಲದಲ್ಲೂ ಜಾತೆಗಳು ಹಾಗೇ ನಡೆದುಕೊಂಡು ಬರುತ್ತಿವೆಯಾದರೂ ಅಂದಿನ ವೈಭವವಿದ್ದರೂ ಆ ಆಶಯ ಆಚರಣಾ ಪರಿ ಇಲ್ಲಿ ತನ್ನ ರೂಪ ಬದಲಿಸಿಕೊಂಡಿದೆ ಅದಕ್ಕೆಲ್ಲವೂ ಕಾರಣ ಬದಲಾದ ವರ್ತಮಾನ, ಮೂಢನಂಬಿಕೆ ಜನರಲ್ಲಿ ಮಾಯವಾಗುತ್ತಿದೆ ಎಲ್ಲವನ್ನುಪ್ರಯೋಗಕ್ಕೆ ಒಳಪಡಿಸಿ ಸ್ವೀಕರಿಸುವ ಕಾಲ ಇದಾಗಿದೆ, ಅಲ್ಲದೆ ಇಂದು ಮಹಾಮಾರಿ ಸಿಡುಬು, ಕುಷ್ಠ ಬೇಮರಿ ಹವಳಿ.

ಈ ರೋಗಗಳು ಬರುತ್ತಿಲ್ಲ ಇವುಗಳ ಬದಲಾಗಿ ಕ್ಯಾನ್ಸರ್, ಡಯಾಬಿಟಿಸ್, Heart attack ಇಂಥವು ಸಮಾಜವನ್ನು ನುಂಗುವ ದೈತ್ಯ ಅಸುರರಾಗಿವೆ. ಆದರೆ ಇವುಗಳನ್ನ ಮಂತ್ರ ಪೂಜೆ ಹರಕೆಗಳು, ಬಲಿಗಳಿಂದ ವಾಸಿಯಾಗುವವಲ್ಲ ಎಂಬ ಸತ್ಯ ಅರಿತವರು "ಮಂತ್ರಕ್ಕೆ ಮಾವಿನ ಕಾಯಿ ಉದುರದು", ಇದಕ್ಕೆ Operation, Injection, Tablete ಡಾಕ್ಟರ್‌ಗಳ ಸಲಿಗೆ ಸಹಾಯ ಉತ್ತಮ ಆಹಾರ ಸೇವನೆ, ಸ್ವಚ್ಛತೆಗಳ ಅಗತ್ಯವಿದೆಯೆಂದು ತಿಳಿದು ಇಂದೆ, ಎಷ್ಟರ ಮಟ್ಟಿಗೆ ವೈದ್ಯಕೀಯ ಕ್ಷೇತ್ರ ಮುಂದುವರಿದಿದೆ ಎಂದರೆ ವ್ಯಕ್ತಿಯ ಅಂಗಗಳನ್ನೆ ಕತ್ತರಿಸಿ ಬದಲಾಯಿಸಬಹುದು. ಕೆಟ್ಟ ಹಣ್ಣನ್ನು ಬೀಸಾಡಿ ಚೆನ್ನಾಗಿರುವುದು ತಿನ್ನುವಂತೆ ದೇವರು ರಚಿಸಿರುವ ರಹಸ್ಯದ ಗೂಡಿನ (ಶರೀರ) ಕೆಟ್ಟ ಭಾಗವನ್ನು ಬೀಸಾಡಿ ಆ ಸ್ಥಾನಕ್ಕೆ ಇನ್ನೊಬ್ಬರ ದೇಹದಲ್ಲಿದ್ದ ಒಳ್ಳೆ ಭಾಗವನ್ನು ಜೋಡಿಸುವುದು ನಡೆದಿದೆ ಅದಕ್ಕಾಗಿ ಜಾತ್ರೆಯಲ್ಲಿನ ಈ ನಂಬಿಕೆ ದೂರವಾಗಿದೆ.

ಜನರು ಇಂದು 75% ಪ್ರತಿಶತದಾಷ್ಟು ತಮ್ಮ ಜಿವನದ್ಧಾರಕ್ಕೆ ಕೈಗಾರಿಕರಣವನ್ನು ಅವಲಂಬಿಸಿದ್ದಾರೆ. ವೃತ್ತಿಗಳನ್ನ ಹೊಂದಿದ್ದು 25% ಪ್ರತಿಶತದಷ್ಟು ಜನ ಕೃಷಿಯಾ - ಧಾರಿತರಾಗಿದ್ದಾರೆ. ಆದರೆ ಅವರು ಹಿಂದಿನಂತೆ 6 ತಿಂಗಳು ಕೆಲಸದಲ್ಲಿ ಮಗ್ನವಾಗಿದ್ದು ಇನ್ನುಳಿದ 6 ತಿಂಗಳು ನಿರುದ್ಯೋಗಿಗಳಾಗಿಲ್ಲ ಅದಕ್ಕೆ ಕಾರಣ ಕೃಷಿ ಮಳೆಯಾಧಾರಿತವಾಗಿಲ್ಲ ಕೊಳವೆ ಬಾವಿ ಆಧಾರಿತವಾಗಿದೆ, ಅದಕ್ಕಾಗಿ ಖರೀಪ, ರಬ್ಬಿ ಬೆಳೆಗಳಾದ ಜೋಳ, ಗೋಧಿ, ಕಡಲೆ, ತೊಗರೆ ಉದ್ದು, ಹೆಸರು, ನವಣೆ ಸಜ್ಜೆಗಳ ಜೊತೆಗೆ ವಾಣಿಜ್ಯ ಬೆಳೆಗಳಾದ ಕಬ್ಬು ಬಾಲೆ, ಗೋಬಿ, ದ್ರಾಕ್ಷಿ, ರೇಷ್ಮೆ ಹಾಗೂ ತರಕಾರಿಗಳನ್ನು ತೆಂಗು, ಅಡಿಕೆಗಳನ್ನ, ಬೆಳೆಯುವುದರಿಂದ ಅವರು ವರ್ಷವೀಡಿ ತಮ್ಮ ಜಮೀನಿನ ಕೆಲಸಗಳಲ್ಲಿ ಬಿಜಿಯಾಗಿರುತ್ತಾರೆ. ಇನ್ನು ಕೆಲವರು ಮಕ್ಕಳ ಶಿಕ್ಷಣಕ್ಕಾಗಿ, ವೃತ್ತಿಗಾಗಿ ಬಿಜಿನೆಸ್‌ಗಾಗಿ ಪಟ್ಟಗಳನ್ನ ಸೇರಿದ್ದಾರೆ. ಹಾಗಾಗೀ ಜಾತ್ರೆಗಳು ನೆರವೇರಿಸಲು ಬಿಡುವು ಇಲ್ಲದವರಾಗಿದ್ದಾರೆ.

ಜನರಿಗೆ ನಿತ್ಯ ಮನೋರಂಜನೆ ನೀಡಲೆಂದೇ ಎಲ್ಲರ ಮನೆಗೂ ಆಗಮಿಸಿದ ದೂರದರ್ಶನ, ಚಲನಚಿತ್ರಗಳು, ರೇಡಿಯೋ ಇತ್ತಿಚೆಗಂತೂ ಕಂಪ್ಯೂಟರ್ Mobile ಗಳು ಎಲ್ಲೆಂದರಲ್ಲಿ ಯಾವಾಗೆಂದರಾವಾಗ ಯಾವುದೇ ರೀತಿಯ ಮನೋರಂಜನೆ ಕೊಡಲು ಸಿದ್ಧವಾಗಿವೆ, ಅದಕ್ಕಾಗಿ ಅವರು ಜಾತ್ರೆಗಳಲ್ಲಿ ನಡೆಯುವ ನಾಟಕ, ಕುಣಿತ, ಟೆಂಟ್ ಸಿನೆಮಾಗಳನ್ನು ನೋಡುವಲ್ಲಿ ಆಸಕ್ತಿ ತೋರುತ್ತಿಲ್ಲ ಅದಕ್ಕೆ ಇವುಗಳು ಮಾಯವಾಗಿವೆ. ಅಲ್ಲದೆ ಜನ ಮನೆಯಲ್ಲೇ ಬೇಕಾದ ಅಡಿಗೆಯನ್ನು ಕ್ಷಣಮಾತ್ರದಲ್ಲಿ ತಯ್ಯಾರಿಸುತ್ತಿದ್ದಾರೆ ಹಾಗೂ ಬೀದಿ/ರಸ್ತೆ ಬದಿಗಳಲ್ಲೇ ಮಾರಲ್ಪಡುವ ತಿಂಡಿ ತಿನಿಸುಗಳು ಆರೋಗ್ಯಕ್ಕೆ ಒಳ್ಳೆಯವಲ್ಲ ಎಂಬ ಕಾರಣದಿಂದ ಅವುಗಳನ್ನು ಯಾರು ತಿನ್ನವುದಿಲ್ಲ ಈಗಂತೂ ಅನೇಕ ಲೇಡಿಜ್ fashion shop storeಗಳು ಎಲ್ಲೆಡೆ ಪಸರಿಸಿರುವುದರಿಂದ ಜಾತ್ರೆಗಳಲ್ಲಿ ಹೆಣ್ಣು ಮಕ್ಕಳ ಖರೀದಿಯ ಸಂಭ್ರಮ ಕುಗ್ಗಿ ಹೋಗಿದೆ ಜನರಿಗೆ ಹೆಚ್ಚಿನ ಕೆಲಸವಿರುವುದರಿಂದ ಅವರಿಗೆ 5–10 ದಿನಗಳು ಕಳೆಯುವುದು ಕಷ್ಟವಾಗುವುದರಿಂದ ಇಂದಿನ ಜಾತ್ರೆಗಳು 2 ದಿನ ಮಾತ್ರ ಆಚರಿಸಲಾಗುತ್ತಿದೆ. ಇನ್ನು ಮಾರುಕಟ್ಟೆಗಳಿಗಾಗಿ ಜಾತ್ರೆಗಳ ಅವಶ್ಯಕತೆಯಿಂದು ಇಲ್ಲ. ಸಮೀಪದ ಪಟ್ಟಣದಲ್ಲಿ ಮಾರುಕಟ್ಟೆಗಳಿದ್ದು, ಅಲ್ಲಿಗೆ ಧವಸ ಧನ್ಯಗಳನ್ನ ರಫ್ತು ಮಾಡಲು ಬೇಕಾದ ಸಾಮಗ್ರಿಗಳನ್ನು Ship-Boat ದೇಶ–ವಿದೇಶಗಳ ಯಾವುದೇ ಮೂಲೆಯಿಂದ ಆಮದು ಮಾಡಿಕೊಳ್ಳಲು ಲಾರಿ, ಬಸ್, ಹೆಲಿಕ್ಯಾಪ್ಟರ್Aero-Plane ಗಳು ಸಾರಿಗೆ–ಸಂಪರ್ಕಗಳಾಗಿ ಬಳಕೆಯಾಗುತ್ತಿವೆ. ಆದ್ದರಿಂದ ರೈತರಿಗೆ ಇದೊಂದು ಕೇವಲ ಧಾರ್ಮಿಕ ಆಚರಣೆಯಾಗಿಯೇ ಉಳಿದಿದೆ ಹೊರತು ಅವರ ಕೃಷಿ ಬದುಕಿನ ಹಿನ್ನಲೆಯ ಕ್ಷೇತ್ರವಾಗಿಲ್ಲ.

ದೇವಸ್ಥಾನಗಳಿಂದು ಸರಕಾರಿ ಸ್ವಾಮ್ಯಗಳಿಗೆ ಒಳಪಟ್ಟಿದ್ದರಿಂದ ಜಾತ್ರೆಗಳ ಕಾರ್ಯವನ್ನು ಕೂಲಿಯವರಿಂದ ಮಾಡಿಸುತ್ತಿದ್ದರು. ಅದಕ್ಕಾಗಿ ಊರವರ ಸಾಮಾಜಿಕ ಸಹಭಾಗಿತ್ವ ಕಾರ್ಯಗಳಲ್ಲಿ ಭಾಗಿವಹಿಸುವುದು ಕಡಿಮೆಯಾಗಿದೆ. ಹಾಗಾಗಿ ಇಲ್ಲಿನ ಸಾಂಸ್ಕೃತಿಕ ಕಾರ್ಯಕ್ರಮಗಳು ಸಾಮಾಜಿಕ, ಸಹಭಾಗಿತ್ವ ಶ್ರದ್ಧೆಯಿಂದ ಸೇವೆ ಸಲ್ಲಿಸುವುದು, ಹೆಣ್ಣು ಮಕ್ಕಳ ಆಸಕ್ತಿ ಕೇಂದ್ರವಾಗಿರುವ ವ್ಯವಸ್ಥೆ ತಿಂಡಿ–ತಿನಿಸುಗಳ ಭರ್ಜರಿ ವ್ಯಾಪಾರ ವಹಿವಾಟು ಕಾರ್ಯಗಾರಗಳೆಲ್ಲ ನಿಂತುಹೋಗಿ ಜಾತ್ರೆ ಕೇವಲ ಧಾರ್ಮಿಕ ನಂಬಿಕೆಯ ಆಧಾರದ ಮೇಲೆ ಜರುಗುತ್ತಿವೆ. ಆದರೂ ಇಂದಿನ ಜಾತ್ರೆಗಳಲ್ಲು ಊರಿನ ಹಿರಿಯರು, ಕಿರಿಯರು, ಗಂಡಸರು, ಹೆಂಗಸರು ಮಕ್ಕಳು ಸುತ್ತಲಿನ ಗ್ರಾಮದವರು ಗ್ರಾಮದವರ ಸಂಬಂಧಿಕರು ಆಪ್ತತರು, ಅಲ್ಲದೆ ಊರಿನಿಂದ ಉದ್ಯೋಗ ಅವಲಂಬಿಸಿ ಪಟ್ಟಣ ಪ್ರದೇಶಗಳಿಗೆ ಹೋದವರು ಈ ಸಂದರ್ಭದಲ್ಲಿ ಜಾತ್ರೆಗಳಲ್ಲಿ ಪಾಲ್ಗೊಳುತ್ತಾರೆ ದೇವರ ರಥವನ್ನು ಎಳೆಯುತ್ತಾರೆ, ಎಲ್ಲರೂ ದೇವರಿಗೆ ತೆಂಗು, ಕಾಯಿ, ಕರ್ಪೂರಗಳನ್ನು ಮಾಡಿ ನಮಸ್ಕರಿಸುತ್ತಾರೆ. ಮಕ್ಕಳು ದೊಡ್ಡವರು ಎಲ್ಲರು ಕೂತು ಮೋಜು ಮಾಡುವ Electrical ಜೋಕಾಲಿಗಳು ಬರುತ್ತವೆ. ಒಟ್ಟಾರೆಯಾಗಿ ಬಹು ಮನೋರಂಜನೆದಾಯಕವಾಗಿ ಇಂದಿಗೂ ಜಾರಿಯಲ್ಲಿವೆ.

ಜಾತ್ರೆ ಎಂದಾಕ್ಷಣ ಸುಮ್ಮನೆ ಆಚರಿಸುವುದಿಲ್ಲ ಅದಕ್ಕೆ ಊರಿನ ಗ್ರಾಮ ದೇವತೆಗಳ ಹೆಸರಿನಲ್ಲಿ ಯಾರೋ ಮಹಾತ್ಮ ಪುರುಷರ ಹಿನ್ನಲೆಯಲ್ಲಿ ಬೆಳೆದುಕೊಂಡು ಬಂದು ಜನಪದರ ಜೀವನದ ಅವಿಭಾಜ್ಯ ಅಂಗಗಳಾಗಿ ಪರಂಪರಾಗತವಾಗಿ ಇಂದಿಗೂ ಆಚರಿಸುತ್ತೆವೆ. ಆದರೆ ಹಿಂದಿಗಿಂತಲೂ ಅವು ಬೇರೆ ರೀತಿಯಲ್ಲಿ ಆಚರಿಸಲ್ಪಡುತ್ತವೆ. ಆಯಾಯಾ ಪ್ರದೇಶದ ಜನರ ಸ್ಥಿತಿ ಗತಿ ನೆಲೆಯ ಹಿನ್ನಲೆಯಲ್ಲಿ ಜಾತ್ರೆಗಳು ಹೆಚ್ಚು ಸಡಗರ ಸಂಭ್ರಮದಿಂದ ಅಥವಾ ಸಾಮಾನ್ಯವಾಗಿ ಏರ್ಪಡುತ್ತವೆ, ಸಂಸ್ಕೃತಿ ನಿಂತನೀರಲ್ಲ ಅದು ಬದಲಾದಂತೆ ಅದರೆಲ್ಲಾ ಅಂಶಗಳನ್ನು ತನ್ನೊಳಗೆ ಅಂಕುರಿಸಿಕೊಂಡ ಜಾತ್ರೆಗಳು ಸಹ ತನ್ನ ವಿವಿಧ ಮಗ್ಗಲುಗಳನ್ನ ವಿಭಿನ್ನ ರೀತಿಯಲ್ಲಿ ತೋರಿಸುತ್ತಾ ನಡೆಯುತ್ತವೆ.

ಜಾತ್ರೆಗಳು ಕಾಲಘಟ್ಟಗಳು ಉರುಳಿದಂತೆ, ಪ್ರದೇಶದಿಂದ ಪ್ರದೇಶಕ್ಕೆ ಹೋದಂತೆ ಬೇರೆ ಬೇರೆ ಜನಾಂಗಗಳಲ್ಲಿ ನೋಡಿದರು ತನ್ನ ರೂಪ ಬದಲಿಸಿರಬಹುದು ಆದರೆ ಜನಪದರ ಕಲೆ, ಆರ್ಥಿಕ, ಪರಿಸ್ಥಿತಿ, ಸಾಮಾಜಿಕ ಬಾಂಧವ್ಯ ಅವರ ಅಲಂಕಾರ ಭೂಷಣಗಳು ದೇವರಲ್ಲಿನ ನಂಬಿಕೆ, ಪೂಜೆ ಪುನಸ್ಕಾರಗಳ ರೀತಿ ಅವರ ಪ್ರಮುಖ ಬೆಳೆಗಳು ಅವರ ಮನೋರಂಜನಾ ಶೈಲಿ ಎಲ್ಲವು ಜಾತ್ರೆಗಳಲ್ಲಿ ಒಗ್ಗೂಡಿ ಹೋಗಿರುವುದರಿಂದ ಜಾತ್ರೆಗಳು ಜನಪದ ಸಂಪತ್ತನ್ನು ಹೊತ್ತು ನಿಂತಿರುವ ನೆಲೆಗಳೆಂಬುದನ್ನು ಜಾತ್ರೆಗಳಿಂದ ಜನಪದರ ಸಂಸ್ಕೃತಿಯ ಅಥವಾ ಜೀವನ ಅಭ್ಯಸಿಸ ಬಹುದೆಂಬ ಅಂಶವನ್ನು ಡಾ॥ ಹೆಬ್ಬಾಲೆಯವರು ತೋರಿದ್ದಾರೆ ಅದಕ್ಕಾಗಿಯೇ ತಮ್ಮ ಅಭಿಪ್ರಾಯವನ್ನು ತಮ್ಮ ಜಾನಪದ ಬನಸಿರಿ ಲೇಖನದಲ್ಲಿ ಮಂಡಿಸಿರುವರು ಇದು ಕೇವಲ ಅವರ ಅಭಿಪ್ರಾಯವೇ ಅಲ್ಲ ಇದು ಸತ್ಯವಾದ ಮಾತೆಂಬುದು ಜಾತ್ರೆಗಳ ವಿಕ್ಷಣೆಯಿಂದ ಮನವರಿಕೆ ಯಾಗುತ್ತದೆ.

ಜಾತ್ರೆಗಳು ಮನತಣಿಸುವ ಆಕರ್ಷಣೆಯನ್ನು ರಮಣಿಯತೆಯನ್ನು ಮೌಲ್ಯವನ್ನು ಹೊತ್ತು ನಿಂತು ಎಲ್ಲರನ್ನು ಕೈಬೀಸಿ ಕರೆಯುತ್ತವೆ.

## ಇ) ಕೊಡವರ ಮದುವೆ

ಜನಪದ ಸಮಾಜದ ಪ್ರಾಥಮಿಕ ಘಟ್ಟಗಳು (ಕುಟುಂಬಗಳು) ಮದುವೆಯಿಂದಾಗಿಯೇ ರಚನೆಯಾಗುತ್ತಿದ್ದವು. ಮನುಷ್ಯ ಲೈಂಗಿಕ ಬಯಕೆಯನ್ನು ಈಡೇರಿಸಿಕೊಳ್ಳಲು. ತನ್ನ ವಂಶಾಭಿವೃದ್ಧಿಯನ್ನು ಮಾಡುವುದಕ್ಕಾಗಿ ಧರ್ಮದ ಕಟ್ಟಳೆಯಲ್ಲಿ ವಿವಾಹವಾಗುತ್ತಿದ್ದ. ಈ ವಿವಾಹಗಳು ವಿಧಿಬದ್ಧವಾಗಿ, ಸಂಪ್ರದಾಯಬದ್ಧವಾಗಿ ಆಚರಿಸಲಾಗುತ್ತದೆ. ಆದರೆ ಅಂದಿನ ಮದುವೆಗಳು 5 – 9 ದಿನಗಳವರೆಗೆ ನಡೆಯುತ್ತಿದ್ದವು. 8 – 19 ದಿವಸಗಳವರೆಗೆ ನೆಂಟರಿಷ್ಟರು, ಬಂಧುಬಳಗದವರು ಬಂದು ನೆಲೆಸಿರುತ್ತಿದ್ದರು. ದಿನ ಒಂದಲ್ಲ – ಒಂದು ರೀತಿಯ ಆಚರಣೆ ಜರುಗುತ್ತಿದ್ದವು.

ಉದಾ – ಒರಳುಕಲ್ಲು ಇಡುವುದು. ಬಳೆ ತೊಡಿಸುವುದು ಸಕ್ಕರೆ ಹಾಕುವುದು, ಭಾಷುಣಕಿ ಕಾರ್ಯಕ್ರಮ, ಮದುವೆ, ಹೀಗೆ ಹಿರಿಯರು – ಕಿರಿಯರು ಗಂಡಸರು – ಹೆಣ್ಣುಮಕ್ಕಳು ಸಂತೋಷದಿಂದ ಭಾಗಿಯಾಗಿರುತ್ತಿದ್ದರು. ಹೆಣ್ಣು ಮಕ್ಕಳಿಂದ ಹಾಡುಗಳು, ಮದುಮಕ್ಕಳಿಂದ ಒಡಪುಗಳು ಹೇಳುವುದು ಸಾಮಾನ್ಯವಾಗಿತ್ತು.

ಹಿಂದಿನ ಕಾಲದಲ್ಲಿ ನಡೆಯುವ ಸಾಂಸ್ಕೃತಿಕ ಕಾರ್ಯಗಳಲ್ಲಿ ಒಂದಾದ ಈ ಮದುವೆಗಳು ಒಂದು ಪ್ರದೇಶದಿಂದ ಇನ್ನೊಂದು ಪ್ರದೇಶಕ್ಕೆ. ಒಂದು ಜಾತಿಯಿಂದ – ಇನ್ನೊಂದು ಜಾತಿಯಲ್ಲಿ ಭಿನ್ನ – ವಿಭಿನ್ನವಾಗಿ ನೇರವೇರಿಸಲ್ಪಡುತ್ತವೆ. ಕರ್ನಾಟಕದ ಮಲೆನಾಡಿನ ಮಡಿಲಿನ ಪ್ರದೇಶವಾದ ಕೊಡಗಿನಲ್ಲಿನ ಕೊಡವರಲ್ಲಿ ಈ ಮದುವೆ ಇನ್ನಷ್ಟು ವಿಭಿನ್ನವಾಗಿ, ವಿಶೇಷವಾಗಿ ನಡೆಸುತ್ತಾರೆ. ಆ ಮದುವೆಗಳು ಇಂದಿನ ಕಾಲದಲ್ಲಿ ಸಾಕಷ್ಟು ಬದಲಾವಣೆಯನ್ನು ಪಡೆದಿವೆ. ಆದರೂ ಮದುವೆಗಳ ಹಿಂದಿನ ಆಶಯ ಮಾತ್ರ ಹಾಗೆಯೇ ಉಳಿದಿದೆ. ಒಟ್ಟಾರೆಯಾಗಿ ಮದುವೆಗಳು ಸಾಮಾಜಿಕ ಸಂಬಂಧವನ್ನು ಬಲಪಡಿಸುವಲ್ಲಿ ಪ್ರಮುಖವಾದ ಪಾತ್ರವನ್ನು ವಹಿಸಿವೆ, ಡಾ. ನಾಗೇಶ ಹೆಬ್ಬಾಲೆಯವರು ಕೊಡವರ ಮದುವೆಯನ್ನು ಕುರಿತು ವಿಶೇಷವಾದ ಕಾಳಜಿಯಿಂದ ಅಧ್ಯಯನ ನಡೆಸಿ "ಕೊಡವರ ಮದುವೆ" ಎಂಬ ಲೇಖನವನ್ನು ಹೊರತಂದಿದ್ದಾರೆ. ಕೊಡವರ ಮದುವೆ ಕುರಿತ ಇದೇ ಲೇಖನ ಮೊದಲನೇಯದೇನಲ್ಲ. ಭಾರತೀಯ ಜಾನಪದ ಅಧ್ಯಯನಕ್ಕೆ ಅಡಿಪಾಯ ಹಾಕಿದ ಪಾಶ್ಚಾತ್ಯ ವಿದ್ವಾಂಸರಲ್ಲಿ ಒಬ್ಬರಾದ ಕೆಟ್ಟೆಲ್ಲರು 1868 ರಿಂದ ಕೆಲಕಾಲ ಕೊಡಗಿನ ಮಡಿಕೇರಿಯಲ್ಲಿ ತಂಗಿದ್ದು ಕೊಡವ ಸಮಾಜದ ಬಗೆಗೆ ಮಾಹಿತಿ ಸಂಗ್ರಹಿಸಿ ಕೊಡವ ಸಮಾಜದಲ್ಲಿ ಪ್ರಚಲಿತವಿದ್ದ "ಬಹುಪತಿತ್ವ" ವ್ಯವಸ್ಥೆಯನ್ನು ಕುರಿತು 'Coorgs Polyandry' ಎಂಬ ಲೇಖನವನ್ನು ಬರೆದರು. ಅಲ್ಲದೆ ಕೊಡವರ ವಿಶಿಷ್ಟ ಮದುವೆ ಪದ್ಧತಿಯಾದ 'ಹುಲಿ ಮದುವೆಯನ್ನು' ರಚಿಸಿದ್ದಾರೆ.

ಸಿ.ಗೋವರ್ಧ 'The Folk Songs of Southern India' ಗ್ರಂಥದಲ್ಲಿ ಮದುವೆಯ ಹಾಡನ್ನು ನೀಡುವ ಮೊದಲು ಕೊಡವರ ಮದುವೆಯ ಸ್ವರೂಪವನ್ನು ವಿವರವಾಗಿ ದಾಖಲಿಸಿದ್ದಾರೆ.

ಕೊಡವರ ಮದುವೆಗಳ ಬಗ್ಗೆ ಈವರೆಗೆ ಬಂದ ಗ್ರಂಥಗಳಿಗಿಂತ ಡಾ. ಹೆಬ್ಬಾಲೆ ನಾಗೇಶರವರ 'ಕೊಡವರ ಮದುವೆ' ಎಂಬ ಲೇಖನ ಕೊಡವರ ಮದುವೆಯ ಬಗ್ಗೆ ಹೆಚ್ಚು ಬೆಳಕು ಚೆಲ್ಲುತ್ತದೆ. ಇದಕ್ಕೆ ಕಾರಣವೆಂದರೆ. ಜಾನಪದ ಅಧ್ಯಯನ ಎನ್ನುವುದು ಆಯಾ ದೇಶದ ಪ್ರಾದೇಶಿಕ, ಸಾಂಸ್ಕೃತಿಕ, ಭೌಗೋಳಿಕ, ಚಾರಿತ್ರಿಕ ಇಂಧವುಗಳ ಹಿನ್ನಲೆಯಲ್ಲಿ ನಡೆಯುತ್ತವೆ. ಒಂದು ನೆಲದ ಸ್ವಂತಿಕೆಯನ್ನು ಅಥವಾ ಒಂದು ಜನಾಂಗದ ಸ್ವಂತಿಕೆಯನ್ನು ಇಂಥ ಅಧ್ಯಯನದ ಮೂಲಕ ಕಂಡುಕೊಳ್ಳಲು ಸಾಧ್ಯವಾಗುತ್ತವೆ. ಈ ನೆಲದ ಮಡಿಲಲ್ಲೆ ಹುಟ್ಟಿ ಅಲ್ಲಿನ ಸಂಸ್ಕೃತಿಯನ್ನು ಹತ್ತಿರದಿಂದಲೇ ಕಂಡು ಬರವಣಿಗೆಯಲ್ಲಿ ಇಳಿಸಿದ್ದಾರೆ. ಹಾಗಾಗಿ ಇವರ ಈ ಜನಪದರ ಬದುಕಿನ ಒಂದು ಅಂಗವಾಗಿರುವ ಈ ಸಂಪ್ರದಾಯ ಕೊಡವ ಜನಾಂಗದವರು ಹೇಗೆ ಆಚರಿಸುತ್ತಾರೆ ಮತ್ತು ಆ ಮದುವೆಗಳಲ್ಲಿ ಎಷ್ಟು ಪ್ರಕಾರಗಳಿವೆ, ಅವುಗಳದೇ ಆದಂತಹ ವೈಶಿಷ್ಟ್ಯವೆನೆಂಬುದನ್ನು ಬಿತ್ತರಿಸಿದ್ದಾರೆ.

ಮಲೆನಾಡಿನ ಮಡಿಲ ನಾಡು ಸೌಂದರ್ಯದ ರಮಣೀಯ ಬೀಡು ಕರ್ನಾಟಕ – ತಮಿಳರ ಜೀವನದಿಯ ಜನ್ಮ ತಾಣವಾಗಿರುವ. ಕರ್ನಾಟಕದ ಕಾಶ್ಮೀರದ ಒಂದು ಭಾಗವಾಗಿರುವ ಕೊಡಗು ದಕ್ಷಿಣ ಭಾರತದಲ್ಲಿರುವ ಒಂದು ಪ್ರಾಂತ್ಯವಾಗಿದೆ. ಬೆಟ್ಟ – ಗುಡ್ಡ, ಹಳ್ಳ – ಕೊಳ್ಳ. ಶಿಖರ – ಪರ್ವತಶ್ರೇಣಿ, ಕೆರೆ, ಹಳ್ಳ, ಕೊಳ್ಳ, ನದಿ ಆಳವಾದ ಕಣಿವೆಗಳಿದ್ದು. ಫಲವತ್ತಾದ ಭೂ ಪ್ರದೇಶಗಳನ್ನೊಳಗೊಂಡಿದ್ದು ಇಲ್ಲಿ ಪ್ರಮುಖವಾಗಿ ವಾಣಿಜ್ಯ ಬೆಳೆಗಳನ್ನು ಬೆಳೆಯಲಾಗುತ್ತದೆ. ಶತಶತಮಾನಗಳಿಂದಲು ಹೊರಜಗತ್ತಿನ ಸಂಪರ್ಕ ಕಡಿದು ಕೊಂಡು ತನ್ನದೇ ಆದ ವಿಶಿಷ್ಟ ಅಂಶಗಳಿಂದ ಕೂಡಿದ ಕೊಡಗನ್ನು 1956ರಲ್ಲಿ ಮೈಸೂರು ರಾಜ್ಯದೊಳಗೆ ವಿಲೀನಗೊಳಿಸಲಾಯಿತು. ಇದು ನೆಲದ ವೈಶಿಷ್ಟ್ಯ. ಇನ್ನು ಇಲ್ಲಿನ ಜನ ಮೂಲತಃ ಇಲ್ಲಿನವರೇ ಅಥವಾ ಬೇರೆಡೆಯಿಂದ ಬಂದು ನೆಲೆಸಿದವರೇ ಎಂಬ ವಿಷಯ ಇನ್ನು ವಾದಗ್ರಸ್ತವಾಗಿಯೇ ಉಳಿದಿರುವುದು, ಇಲ್ಲಿಯ ಜನರ ಭಾಷೆ ಕೊಡವ ಇತ್ತೀಚಿನವರೆಗೂ ಅವರು ತಮ್ಮದೇ ಆದ ಒಂದು ರಾಜ್ಯ (ಪ್ರತ್ಯೇಕ ರಾಜ್ಯ)ದ ಹೋರಾಟ ಮಾಡಿದರು ಆದರೆ ಇದರಿಂದ ಕರ್ನಾಟಕ ರಾಜ್ಯ ಹರಿದು ಹಂಚಿದಂತಾಗುವುದೆಂದು ಅವರ ಬೇಡಿಕೆಯನ್ನು ಈಡೇರಿಸಲಾಗಲಿಲ್ಲ. ಹಾಗಾಗಿ ಇಂದು ಕರ್ನಾಟಕ ರಾಜ್ಯದ ಒಂದು ಜಿಲ್ಲೆಯಾಗಿ ಉಳಿದಿದೆ.

ಆದರೂ ಕರ್ನಾಟಕದ ಇತರ ಕನ್ನಡಿಗರಿಗಿಂತ ಇವರ ಭಾಷೆ, ಶರೀರ ರಚನೆ ಆಹಾರ ಪದ್ಧತಿ. ವಿವಾಹ, ಕಲೆ, ಆಭರಣ, ವಾದ್ಯಗಳು, ಸಾಹಿತ್ಯ, ಧಾರ್ಮಿಕ ಸಾಂಸ್ಕೃತಿಕ ಆಚರಣೆಗಳು, ಸಾಮಾಜಿಕ, ಆರ್ಥಿಕ, ರಾಜಕೀಯ ಪದ್ಧತಿಗಳು ವಿಭಿನ್ನವಾಗಿವೆ.

ಒಟ್ಟಾರೆಯಾಗಿ ಇವರ ಬದುಕಿನ ಒಟ್ಟು ಆಯಾಮವೇ ಇತರರಿಗೆ ಹೋಲಿಕೆಯಾಗದಂತಿತ್ತು. ಅದನ್ನು ಈ ಮುಂದಿನಂತೆ ಕಾಣಬಹುದುದಾಗಿದೆ.

**ಕೊಡವರ ಸಾಮಾಜಿಕ ಜೀವನ:–**

ಕೊಡವರು ಮೂಲತಃ ಬುಡಕಟ್ಟು ಸಮುದಾಯದವರಾಗಿರುವ್ಯದರಿಂದ. ಇವರು ಅಲೆಮಾರಿಗಳಂತೆ. ತಮ್ಮ ತಮ್ಮ ಕೃಷಿ ಭೂಮಿಗಳಲ್ಲೇ ಗುಡಿಸಲು (ಮನೆ)ಗಳನ್ನು ನಿರ್ಮಿಸಿಕೊಂಡರು. ಹಾಗಾಗಿ ಒಂದು ಕುಟುಂಬದಿಂದ – ಇತರ ಜನಾಂಗಳಿಗಿಂತ ಇವರ ಗ್ರಾಮರಚನೆಯು ವಿಶಿಷ್ಟವು ವಿಭಿನ್ನವೂ ಆಗಿದೆ. ಈ ದೂರಕ್ಕೆ ಅವರವರ ಆಸ್ತಿಯ ವಿಸ್ತಾರವೇ ಕಾರಣವಾಗಿರುತ್ತದೆ. ಹೀಗೆ ದೂರವಿರುವ ಕುಟುಂಬಗಳಿದ್ದರು ಅವುಗಳನ್ನೆಲ್ಲ ಸೇರಿಸಿ ಒಂದು ಗ್ರಾಮ ರಚಿಸಲಾಗಿರುತ್ತದೆ. ಆ ಗ್ರಾಮದ ಜನರೆಲ್ಲಾ ಸೇರಿ ಗ್ರಾಮಕ್ಕೊಬ್ಬ 'ತಕ್ಕ' (ನಾಯಕ/ ಗ್ರಾಮಾಧ್ಯಕ್ಷ) ನನ್ನ ನೇಮಿಸುತ್ತಾರೆ. ಈತ ಗ್ರಾಮದ ಎಲ್ಲಾ ಉಸ್ತುವಾರಿ ಇವನಿಗೆ ಸೇರಿದ್ದಾಗಿರುತ್ತದೆ. ಈತನಿಗೆ ಭತ್ಯೆಯಾಗಿ ಊರಜನ ಹಣ ಅಥವಾ ಧ್ಯಾನ್ಯಗಳನ್ನು ನೀಡುತ್ತಾರೆ.

ಗ್ರಾಮಸ್ಥರೆಲ್ಲರೂ ಗ್ರಾಮದಲ್ಲಿ ಜರುಗುವ ಜಾತ್ರೆ ಉತ್ಸವ, ನೃತ್ಯ, ಬೇಟೆ, ಹಬ್ಬಗಳಲ್ಲಿ ಸಾಮೂಹಿಕವಾಗಿ ಪಾಲ್ಗೊಳದಿದ್ದಾಗ ಅಂತಹವರನ್ನು ಗ್ರಾಮದಿಂದ ಹೊರಹಾಕಲಾಗುತ್ತದೆ. ಆಗ ಅವರು ಊರಿನ ಯಾವುದೇ ಕಾರ್ಯಗಳಲ್ಲಿ ಭಾಗಿಯಾಗುವಂತಿಲ್ಲ. ಅಲ್ಲದೆ ಅವರ ಮೇಲೆ ದಂಡ ವಿಧಿಸಲಾಗುವುದು. ಬೇಕಾವುದೇ ಕೊಡವ ಆತನಿಗೆ ಸಹಾಯ ಮಾಡುವಂತಿಲ್ಲ. ಅವರೊಂದಿಗೆ ಮಾತನಾಡುವ ಹಾಗೂ ಇಲ್ಲ. ಅಲ್ಲದೆ ಅವರ ದನಗಳು ಬಯಲಿಗೆ ಬಿಡುವಂತಿಲ್ಲ. ಆದರೆ ತಪ್ಪು ಮಾಡಿದವನು ತಪ್ಪಾಯಿತೆಂದು ಒಪ್ಪಿಕೊಂಡು ಮುಂದೆ ಹೀಗೆ ಮಾಡುವುದಿಲ್ಲವೆಂದು ಹೇಳಿದಾಗ ಆತನ ತಪ್ಪನ್ನು ಮನ್ನಿಸಲಾಗುತಿತ್ತು. ಅದು ಕಪ್ಪುಕಾಣಿಕೆಯನ್ನು ಪಡೆದು. ಕೊಡವರು ಸ್ನೇಹಪರರು ಹಾಗೂ ಅತಿಥಿಸತ್ಕಾರಕ್ಕೆ ಹೆಸರು ವಾಸಿಯಾಗಿರುವರು. ಇವರಲ್ಲಿ ಆರ್ಥಿಕವಾಗಿ ಹಿಂದುಳಿದವರು. ಕಡಿಮೆ ಆಸ್ತಿ ಉಳ್ಳವರು ತಮ್ಮ ಮನೆ. ಗದ್ದೆ, ತೋಟಗಳ ಕೆಲಸ ತಾವೇ ಮಾಡಿಕೊಳ್ಳುತ್ತಿದ್ದರು. ಆಸ್ತಿ ಇಲ್ಲದಿದ್ದವರು ಶ್ರೀಮಂತರ ಆಸ್ತಿಗಳಲ್ಲಿ ದುಡಿಯುತ್ತಾರೆ. ಇವರು ಪ್ರಾಣಿಗಳನ್ನು ಸಾಕುತ್ತಿದ್ದರು (ಕೋಳಿ, ಹಂದಿ, ನಾಯಿ, ದನಕರು etc.) ಇವರ ಮುಖ್ಯ ಕಸುಬು ವ್ಯವಸಾಯ ಇವರು ಬೆಳೆಯುವ ಪ್ರಮುಖ ಬೆಳೆಗಳೆಂದರೆ ಬತ್ತ, ಕಾಫಿ, ಕಿತ್ತಳೆ, ಏಲಕ್ಕಿ, ಮೆಣಸು.

ಕಾಲಘಟ್ಟಗಳು ಕಳೆವಂತೆ ಇವರ ಸಾಮಾಜಿಕ ಜೀವನದಲ್ಲಿ ಏರು ಪೇರುಗಳು ಕಂಡು ಬರುತ್ತವೆ.

**ಧಾರ್ಮಿಕತೆ:**

ಕೊಡವರು ಅಪಾರ ದೈವಭಕ್ತರು, ಕಾವೇರಿ. ಐಯ್ಯಪ್ಪ, ಬೀರ, ಚಾಮುಂಡೇಶ್ವರಿ, ಇಗುತಪ್ಪ, ಗಣಪತಿ ಹೀಗೆ ಹಲವಾರು ದೇವರನ್ನ ಪ್ರಾರ್ಥಿಸುತ್ತಾರೆ. ಇವರಲ್ಲಿ ಬಲಿಪದ್ಧತಿ ಜಾರಿಯಲ್ಲಿದೆ. ಒಲೆಯಲ್ಲಿನ ಬೂದಿಗೆ (ಭಸ್ಮಕ್ಕೆ) ಇವರಲ್ಲಿ ಹೆಚ್ಚಿನ ಪ್ರಾಶ್ಯಸ್ಥವಿದೆ. ಇವರಲ್ಲಿ ಪ್ರತಿಯೊಂದು ಮನೆಯಲ್ಲಿ 'ಕೈಮಡ' (ದೇವರ ಮನೆ) ಇದ್ದು ಅದರಲ್ಲಿ ಕೊಡವರ ಸಾಂಪ್ರದಾಯಿಕ ಉಡುಗೆತೊಟ್ಟ ವ್ಯಕ್ತಿಯ ವಿಗ್ರಹವಿರುತ್ತದೆ ಅದನ್ನು 'ಗುರು' / 'ಕಾರಣ' ವೆಂದು ಕರೆಯುತ್ತಾರೆ. ಮಾಟ, ಮಂತ್ರ, ಭೂತ, ಪ್ರೇತಗಳ ನಂಬಿಕೆಯು ಇದೆ.

**ಉಡುಗೆ ತೊಡುಗೆ:**

ಕೊಡವರ ಉಡುಗೆಗಳು ವಿಶಿಷ್ಟ ಮತ್ತು ಆಕರ್ಷಕವಾಗಿದೆ. ಪುರುಷರು ಅರ್ಧತೋಳಿನ 'ವಿ' ಆಕಾರದ ಕಪ್ಪು ಬಣ್ಣದ ಕುಪ್ಪಸ. ಮೊಣಕಾಲು ಮಚ್ಚುವರೆಗೆ ಇರುತ್ತದೆ. ಅದಕ್ಕೆ 'ದಟ್ಟಿ'ಯನ್ನು ಕಟುತ್ತಾರೆ ಇದಕ್ಕೆ ಹೆಚ್ಚು ಬೆಲೆ ಇದ್ದು ಇದರ ತುದಿಯಲ್ಲಿ ಕೆಂಪು ರೇಷ್ಮಯ ಆ ದಟ್ಟಿಯಲ್ಲಿ ಯಾವಾಗಲೂ ಬೆಳ್ಳಿ ಚಿನ್ನದಿಂದ ಮಾಡಿದ ಕತ್ತಿ ಸಿಕ್ಕಿಸಿಕೊಳ್ಳುತ್ತಿದ್ದರು. ತಲೆಯ ಮೇಲೆ ರುಮಾಲನ್ನು ಧರಿಸುವರು.

ಸ್ತ್ರೀಯರು ತೋಳು ತುಂಬುವಂತ ರವಿಕೆ, ತಲೆಗೆ ಜರತಾರಿ ಅಂಚಿನಿಂದ ಕೂಡಿದ ಕೆಂಪು ವಸ್ತ್ರವನ್ನು ಧರಿಸುವರು. ಇವರು ಉಡುವ ಸೀರೆ ಪದ್ದತಿಯ ಆಕರ್ಷಣೀಯವಾದದ್ದು ವಿಧವೆಚುರು ಬಿಳಿ ಸೀರೆಯನ್ನ ಧರಿಸುವರು. ಶವದ ಅಂತ್ಯ ಸಂಸ್ಕಾರದಲ್ಲಿ ಭಾಗವಹಿಸುವವರೆಲ್ಲಾ ಬಿಳಿ ಬಟ್ಟೆಗಳನ್ನೆ ಧರಿಸುವರು, ಶವದ ಮೇಲೂ ಬಿಳಿ ಬಟ್ಟೆ ಹಾಕುತ್ತಾರೆ. ಆಭರಣಗಳು, ಪುರುಷರಿಗಿಂತ ಸ್ತ್ರೀಯರು ಹೆಚ್ಚು ಆಭರಣ ಪ್ರಿಯರಾಗಿರುತ್ತಾರೆ. ಕುತ್ತಿಗೆಗೆ ಸರ, ಕೈಬಳೆ, ಬೆರಳಿಗೆ ಉಂಗುರ, ಎಲ್ಲರು ಧರಿಸುವರು. ಇನ್ನ ವಿವಾಹಿತ ಸ್ತ್ರೀಯರು ಕಾಮೋದಿರ, ಪೊಮ್ಮಲೆ, ಪತ್ತಾಕ್, ಜ್ಯೋಮಾಲೆ, ಜಡೆಬಿಲ್ಲೆ, ಕೊಕ್ಕೆತಾಲಿ, ಡಾಬು ಬೈತಲೆಬೊಟ್ಟು ಹಾಕಿಕೊಳ್ಳುವರು.ಪುರುಷರಿಗೆ ಬೇಟೆಗಳಲ್ಲಿ ಬಳಸುವ ಆಯುಧಗಳೇ ಆಭರಣಗಳಾಗಿ ಶೋಭೆ ನೀಡುತ್ತವೆ.

**ಕುಟುಂಬ:**

ಕೊಡವರ ಕುಟುಂಬಗಳು ಸಂಪ್ರದಾಯಬದ್ಧವಾದ ಕುಟುಂಬವಾಗಿರುತ್ತಿದ್ದವು. ಎಲ್ಲಾ ಆಚರಣೆಗಳು ಶಾಸ್ತ್ರಬದ್ಧವಾಗಿ ನೇರವೇರಿಸಲ್ಪಡುತ್ತಿದ್ದವು. ಈ ಕುಟುಂಬಗಳಿಗೆ ಮೂಲ ಸ್ಥಾಪಕರಿದ್ದಾರೆ. ಪಿತೃಪ್ರಧುನವಾದ ಕುಟುಂಬಗಳು ಇವಾಗಿದ್ದವು.

ಅಭಿವೃದ್ಧಿ ಹೊಂದಿ ಬಂದ ಕುಟುಂಬ ಸಮೂಹಗಳನ್ನು 'ಒಕ್ಕ' ಎನ್ನುತ್ತಾರೆ. ಮದುವೆಯ ವಿಷಯದಲ್ಲಿ ಹೆಣ್ಣುಮಕ್ಕಳಿಗೂ ಸ್ವಾತಂತ್ರ್ಯವಿದೆ, ಒಬ್ಬರ ಮನೆಯ ಸಾವು– ನೋವು ಕಷ್ಟ – ಸುಖ ಹಬ್ಬ–ಹರಿದಿನಗಳಲ್ಲಿ ಶುಭ ಸಮಾರಂಭಗಳಲ್ಲಿ ಇನ್ನೊಬ್ಬರು ಪಾಲ್ಗೊಳುತ್ತಿದ್ದರು.

ಎಲ್ಲಾ ವಿಷಯಗಳಲ್ಲಿ ಉಳಿದ ಜನಾಂಗಕ್ಕಿಂತ ವಿಭಿನ್ನವೂ. ವಿಶೇಷವೂ ಆಗಿ ಗುರುತಿಸಿಕೊಂಡ ಕೊಡವರು. ಮಾನವ ಜನ್ಮಕ್ಕೆ ವಿವಾಹ ಪದ್ಧತಿ ಅಗತ್ಯವಾದದ್ದು ಎಂದು ನಂಬಲಾಗಿರುವ ಮದುವೆಯನ್ನು ವಿಶಿಷ್ಟವೂ, ಸಂಪ್ರದಾಯ ಬದ್ಧವಾಗಿಯೂ. ವಿಭಿನ್ನವಾಗಿಯೂ ನೆರವೇರಿಸಲಾಗುತ್ತದೆ.

**ವಿವಾಹ ಪದ್ಧತಿ:**

ಕೊಡವರಲ್ಲಿ 'ವಿವಾಹ' ವೆಂಬ ಪದವು ತನ್ನದೇ ಆದಂತಹ ಮೌಲ್ಯ, ವ್ಯಾಪ್ತಿ, ಮತ್ತು ಶಕ್ತಿ ಪಡೆದಿದೆ. ಸರ್ವಸಾಮಾನ್ಯವಾಗಿ ಪ್ರತಿಯೊಂದು ಜನಾಂಗ, ಜಾತಿಯವರಲ್ಲಿ ಈ ಪದ್ಧತಿ ನಡೆಯುತ್ತಲೆ ಹೊರಟ್ಟಿದೆ. ಇವರಲ್ಲಿ ವೈವಿಧ್ಯಮಯವಾದ (ಹಲವಾರು ಬಗೆಯ) ವಿವಾಹ ಆಚರಣೆಗಳಿವೆ. ಕೊಡವ ಸ್ತ್ರೀಯರು ಒಂದೇ ವಿವಾಹವಾಗಬೇಕೆಂಬ ನಿಯಮವಿದ್ದು. ಪುರುಷ ಏಳು ರೀತಿಯ ವಿವಾಹಮಾಡಿಕೊಳ್ಳುವ ಪದ್ಧತಿಯಿದೆ. ಇವು ಇತ್ತೀಚೆಗೆ ಬೆಳೆದು ಬಂದವುಗಳೇನು ಅಲ್ಲ ಶತಶತಮಾನಗಳಿಂದಲೂ ಮನ್ನಣೆ ಪಡೆದು ನಡೆದುಕೊಂಡು ಬಂದ ಪದ್ಧತಿಗಳು ಇಂತಿವೆ. 1. ಕನ್ನಿಮಂಗಲ 2. ಕೂಡಾವಳಿ 3. ಕೊದಿಮಂಗಲ 4. ಮಕ್ಕ ಪರಿಜೆ 5. ಕುಟ್ಟಪರಿಜೆ 6. ಪೈತಾಂಡಕಳಿಪ ಮಂಗಲ 7. ಒಕ್ಕಪರಿಜೆ 8. ಕೆಮಿಕುತ್ತಿ ಮಂಗಲ 9. ನರಿ ಮಂಗಲ (ಹುಲಿವಿವಾಹ – ನರಿಮದುವೆ – ಪುಲಿಮಂಗಲ)

ಇಷ್ಟು ಪ್ರಕಾರಗಳಲ್ಲಿ ಕನ್ನಿಮಂಗಲ ಪದ್ಧತಿ ಎಲ್ಲಾ ಜನಾಂಗ, ಕಾಲ, ಪ್ರದೇಶಗಳಲ್ಲಿರುವ ವಿವಾಹದಂತೆ ವಿಧಿವತ್ತಾಗಿ ನೆರವೇರಿಸಲ್ಪಡುವಂತಹದು. ನರಿಮಂಗಲ ಪದ್ಧತಿಯು ಕೇವಲ ಕೊಡವ ಜನಾಂಗದಲ್ಲಿ ಮಾತ್ರ ನೆರವೇರಿಸಲ್ಪಡುತ್ತಿದ್ದು ಹಾಗೂ ವಿಶಿಷ್ಟವಾದ ಆಶಯದಿಂದ ಮತ್ತು ವಿಭಿನ್ನವಾದ ಸನ್ನಿವೇಶದಲ್ಲಿ ವಿಶಿಷ್ಟವಾದ ರೀತಿಯಲ್ಲಿ ಆಚರಿಸಲ್ಪಡುವಂತಹದು. ಕೆಲವೊಂದು ಸಂದರ್ಭದಲ್ಲೂ ಇನ್ನೂಳಿದ ಪ್ರಕಾರಗಳು ಸಾಧಾರಣ ವಿವಾಹ ಪದ್ಧತಿಗಳು ಆಗಿದ್ದು ಕೆಲವೊಂದು ಒಕ್ಕಗಳಲ್ಲಿ ಮಾತ್ರ ಆಚರಿಸಲ್ಪಡುತ್ತವೆ. ಈ ಮದುವೆಗಳು ಮಾನವ. ಅರ್ಥ, ಕಾಮ, ಮೋಕ್ಷಗಳಲ್ಲಿ ಒಂದಾಗಿರುವ ಕಾಮ (ಲೈಂಗಿಕ) ಬಯಕೆಯನ್ನು, ಒಂದು ಧರ್ಮದ ಕಟ್ಟಳೆಯಲ್ಲಿ ಈಡೇರಿಸಿಕೊಳ್ಳಲು ಏರ್ಪಡಿಸಿಕೊಂಡ ಒಂದು ಬಂಧವೇ ಮದುವೆ, ಇದರಿಂದ ಅವರ ವೃಂಶಾಭಿವೃದ್ಧಿಯು ಆಗುತ್ತಿತ್ತು. ವೇದ ಪ್ಮರಾಣಗಳ ಕಾಲದಲ್ಲಿನಿಂದ ಇಲ್ಲಿವರೆಗೂ ಮದುವೆ ಸಾಮಾಜಿಕ ಮನ್ನಣೆಯನ್ನು, ವೈಶಿಷ ತೆಯನ್ನು, ಅದ್ದೂರಿ ಸಮಾರಂಭವನ್ನು ಹೊಂದಿ ನಡೆದುಕೊಂಡು ಬಂದಿದೆ, ಆದರೆ ಅದರ ಪರಂಪರಾಗತ ದಾರಿಯಲ್ಲಿ ಕಾಲದಿಂದ – ಕಾಲಕ್ಕೆ – ಪ್ರದೇಶದಿಂದ – ಪ್ರದೇಶಕ್ಕೆ ಭಿನ್ನವಾಗಿ ಗುರುತಿಸಿಕೊಂಡಿದೆ.

**ಕನ್ನಿಮಂಗಲ:**

ಇದೊಂದು ಸಾಂಪ್ರದಾಯಿಕವಾದ ವಿವಾಹವಾಗಿದ್ದು. ಇದು ಇಂದಿನ ಅರೇಂಜ್ ಮ್ಯಾರೇಜ್‌ಗಳ ಪದ್ಧತಿಯಾಗಿದ್ದು ಕೊಡವರಲ್ಲಿ ಇತರ ವಿವಾಹ ಪದ್ಧತಿಗಳಿಗಿಂತ ಈ ವಿವಾಹ ಹೆಚ್ಚು ಪ್ರಾಶ್ಯಸ್ತ್ಯ ಪಡೆದಿದ್ದು ಇಲ್ಲಿ ಹುಡಗ – ಹುಡುಗಿಯ ಗುಣ. ಅವರ ಕೌಟುಂಬಿಕ ಹಿನ್ನಲೆ, ಅವರ ಜಾತಕಗಳು ಸರಿ ಹೊಂದಿದರೆ ಮಾತ್ರ ಅಲ್ಲಿ ಸಂಬಂಧ ಬೆಸೆಯುವುದಿಲ್ಲಾ, ಆ ಸಂಬಂಧಕ್ಕೆ ದೇವರ ಒಪ್ಪಿಗೆಯೂ ಪ್ರಮುಖವಾಗಿರುವುದು. ಈ ಒಪ್ಪಿಗೆ ದೇವರು ತನ್ನ ಮೇಲಿನ 'ಹೂ' ಬೀಳಿಸುವುದರ ಮುಖಾಂತರ ಸೂಚಿಸುತ್ತಾನೆ. ಅಲ್ಲಿ ದೇವರಿಂದ ಒಪ್ಪಿಗೆ ಸಿಕ್ಕಿ ಬಿಟ್ಟಿತೆಂದರೆ, ಅಲ್ಲಿಂದ ಶುರುವಾಯಿತು ಆಚರಣೆಗಳ ಸರಣಿ – ಇದು ಮದುವೆವರೆಗೂ ನಿಲ್ಲುವುದಿಲ್ಲ.

ಗಂಡು – ಹೆಣ್ಣಿನ ಮನೆಯವರು ಒಂದಡೆ ಸೇರಿ ಮದುವೆಗೆ ಒಪ್ಪಿಗೆ ಸೂಚಿಸಿ ಮಾತುಕತೆಯನ್ನು ಆಡಲು ಪ್ರಾರಂಭಿಸುತ್ತಾರೆ. ಈ ಕೆಲಸ ಅವರು ನಡುಮನೆಯಲ್ಲಿ ದೀಪ ಹೊತ್ತಿಸಿ ಅದಕ್ಕೆ ನಮಸ್ಕರಿಸಿ ಅಲ್ಲೆ ಸಾಗುತ್ತದೆ. ನಂತರ ಎಲ್ಲರೂ ಗಂಡು – ಹೆಣ್ಣು ಯಾವುದೇ ನದಿದಾಟಬಾರದು. ಯಾಕೆಂದರೆ ಮಲೆನಾಡಿನ ಸುತ್ತಮುತ್ತಲೆಲ್ಲಾ ಕೆರೆ, ನದಿಗಳೇ ಇದ್ದು ಆಜಾಗದಲ್ಲಿ ಅವರಿಗೆ ದೆವ್ವ ಭೂತಗಳು ಹಿಡಿಯಬಹುದೆಂಬ ನಂಬಿಕೆಯಿದೆ. ಅಲ್ಲದೆ ಆ ಊರೊಳಗೆ ಯಾರಾದರೂ ಸತ್ತರೆ ಆ ಸುದ್ದಿಯನ್ನು ಅವರಿಗೆ ಮುಟ್ಟಿಸಬಾರದು. ತಿಳಿದರು ಅವರು ಅಂತ್ಯಸಂಸ್ಕಾರಕ್ಕೆ ಹೋಗಬಾರದು. ಇನ್ನು ಮದುವೆಯ ಹಿಂದಿನ ದಿನ ಅಥವಾ ಮದುವೆಯ ದಿನವೇ ಅವರ ಮನೆಯಲ್ಲಿ ಯಾರಾದರೂ ತಿರಿದರೆ ಮದುವೆ 11 ದಿನಗಳವರೆಗೆ ಮುಂದೂಡಲಾಗುತ್ತಿತ್ತು ಅಥವಾ ಇನ್ನೊಬ್ಬರ ಮನೆಯಲ್ಲೆ ವಿವಾಹ ನೇರವೇರಿಸಲಾಗುತ್ತಿತ್ತು.

**ವಿವಾಹದ ವಿಶಿಷ್ಟ ವಿಧಾನಗಳು:**

ಮದುವೆಯ ಹಿಂದಿನ ದಿನವನ್ನು ಚಪ್ಪರ / ಭಾಷಣಕೆ ದಿನವೆನ್ನುವರು. ಈ ಊರಿನ ಜನರಿಗೆಲ್ಲಾ ಐದು ಎಲೆ, ಅಡಿಕೆ, ಬಾಳೆ ಹಣ್ಣು, ತೆಂಗಿನ ಕಾಯಿ, ಹುರಿಗಾಳು, ಐದು ದಿನಿಸುಗಳನ್ನು ಕೊಟ್ಟು ಮದುವೆಗೆ ಆಹ್ವಾನಿಸುತ್ತಾನೆ. ಆ ಆಮಂತ್ರಣವನ್ನು ಸ್ವೀಕರಿಸಿದ ಒಕ್ಕದವರ ಮನೆಯಿಂದ ಸ್ತ್ರೀ–ಪುರುಷರು ಮದುವೆ ಮನೆಗೆ ಬರುತ್ತಾರೆ.

ಶಾಸ್ತ್ರದ ಪ್ರಕಾರ ಹಾಲು ಅಥವಾ ಹತ್ತಿ ಬರುವ 7 ಕಂಬಗಳನ್ನು ನೆಟ್ಟು ಅದರ ಮೇಲೆ ಮಾವಿನ ಮರದ ಅಥವಾ ಇತರ ಜಾತಿಯ ಮರದ ಸೊಪ್ಪನು ಹಾಕಿ ಚಪ್ಪರ ನಿರ್ಮಿಸಿ ಅದಕ್ಕೆ ಮಾವಿನ ಮತ್ತು ಹೂವಿನ ತೋರಣಗಳನ್ನು ಕಟ್ಟಿ ಶೃಂಗರಿಸುವರು. ಅದರಲ್ಲಿ ಮೂರು ಕಾಲಿನ–ಮಣಿ ಹಾಸಿ ಅದರ ಮೇಲೆ ವಧು–ವರರ ಕೈಗೆ ಗೊರಂಟಿ ಹಾಕುವರು. ಸಂಜೆ ಮುತ್ತೈದೆಯರಿಗೂ ಹಾಗೂ ವಧುವಿಗೆ ಬಳೆ ಹಾಕುವ ಶಾಸ್ತ್ರವಿರುತ್ತದೆ. ಆಗ ಬಳೆಗಾರನಿಗೆ ಒಂದು ತಟ್ಟೆಯಲ್ಲಿ ಬಾಳೆಹಣ್ಣು, ಮತ್ತೊಂದರಲ್ಲಿ ಅಕ್ಕಿ, ಎಲೆ, ಅಡಿಕೆ, ಕುಂಕುಮ, ಇನ್ನೂ ಮುಂತಾದವುಗಳನ್ನು ಇಟ್ಟು – ಅವುಗಳನ್ನು ಕೊಡವರು.

**ಧಾರೆ:**

ಮದುವೆಯ ದಿನವಾದ ಇಂದು ವಧುವರರಿಗೆ ಕೊಡವರ ಸಾಂಪ್ರದಾಯಿಕ ಉಡುಗೆಗಳನ್ನು ಹಾಕಿ ಎಲ್ಲಾ ರೀತಿಯ ಆಭರಣಗಳಿಂದ ಶೃಂಗರಿಸಿ, ಹಣೆಗೆ ವಿಭೂತಿ ಹಚ್ಚಿ, ಬಾಯಿಗೆ ವಿಳ್ಯದೆಲೆ ಹಾಕುವರು. ಇಲ್ಲಿಂದ ವ್ಯಾದ್ಯ ಬಾರಿಸುತ್ತಾ ಮದುವೆ ಮಂಟಪಕ್ಕೆ ಕರೆ ತರುವರು ಅವರು ನಡೆವ ದಾರಿಯಲ್ಲಿ ಮಡಿವಾಳ ಬಟ್ಟೆ ಹಾಸುವನು, ವಧುವಿನ ಕೈ ಭೋಜಕಾರಿಣಿಯೂ ವರನ ಕೈ ಹಿಡಿದುಕೊಂಡು ಬರುತ್ತಾನೆ.

ಧಾರೆಗೆ ಸ್ಥಳ, ಕಾಲ ದಿಕ್ಕುಗಳನ್ನು ಪಂಚಾಂಗದಲ್ಲಿ ನೋಡಿ ನಿಶ್ಚಯಿಸಿದ್ದಂತೆ ಶಾಸ್ತ್ರೋಕ್ತವಾಗಿ ಜರುಗುತ್ತವೆ. ಆ ಸಮಯದಲ್ಲಿ ಮದುವೆಯಲ್ಲಿ ಪಾಲ್ಗೊಂಡವರು ಅಕ್ಷತೆ ಹಾಕುವರು. ಊಟೋಪಚಾರ, ಮುಯ್ಯಿ ಮಾಡುವುದಾದ ಮೇಲೆ ವಧುವಿನ ಅತ್ತಿಗೆ ವಧುವಿಗೆ ದೃಷ್ಟಿ ತಾಕಬಾರದೆಂದು ಆಕೆಯ ಉಗುರನ್ನು ಕತ್ತರಿಸಿ ಚಿಕ್ಕ ಹಾಲಿನ ಪಾತ್ರೆಗೆ ಹಾಕಿ ಅದನ್ನು ಹಾಲು ಬರುವ ಮರದ ಬುಡಕ್ಕೆ ಚೆಲ್ಲುವಳು ಈ ಒಂದು ಪದ್ಧತಿ ಹಾಗೂ ಮದುವೆ ಮನೆಗೆ ನೆಂಟರಿಷ್ಟರು ಆಹಾರ ಸಾಮಗ್ರಿಗಳನ್ನು (ಕೇಟಾವೆ). ಒದಗಿಸುವ ಕ್ರಮ ಹಾಗೂ ಮದುವೆಯ ನಂತರ ಬೀಗರ ಮನೆಯ ಮುಂದಿನ ಬಾಳೆ ಕಂಬಗಳನ್ನು ಮದ್ಯ ಸಮೇತ ಎಲ್ಲರೂ ಹೋಗಿ ಕತ್ತಿಯಿಂದ ಕತ್ತಿಸುವ ಪರಿ ಇವರಲ್ಲಿ ಇರುವ ವಿಶಿಷ್ಟ ಹಾಗೂ ವಿಚಿತ್ರವಾದ ಆಚರಣೆಯಾಗಿವೆ. ಇದರೊಂದಿಗೆ 'ಪೋಳಿ' ಹೊತ್ತು ಹೋಗುವುದು ಅದನ್ನು ಹೊತ್ತವರಿಗೆ ಮಂಗಳ ದ್ರವ್ಯಕೊಡುವ ಪರಿಯು ಕೇವಲ ಕೊಡವರಲ್ಲೆ ಇರುವ ಆಚರಣೆಯಾಗಿದೆ, ನಂತರ ದಿಬ್ಬಣದೊಂದಿಗೆ ವರ ವಧುವನ್ನು ತನ್ನ ಮನೆಗೆ ಒಯ್ಯುತ್ತಾನೆ. ಅಲ್ಲಿ ಸಂಜೆಯಿಂದ ಮತ್ತೆ ಶಾಸ್ತ್ರಗಳು ಜರುಗುತ್ತವೆ.

ತದನಂತರ ಅವರಿಬ್ಬರನ್ನು ಕೋಣೆಗೆ ಕಳುಹಿಸುವಾಗ ವಧುವಿನ ಸೋದರಮಾವನ ಮಗ ಅಥವಾ ಸೋದರತ್ತೆಯ ಮಗ ದಾರಿಯನ್ನು ತಡೆದು ತನ್ನ ಹೆಂಡತಿಯಾಗುವಳನ್ನು ನೀನು ಮದುವೆಯಾಗಿರುವೆ ಅವಳಿಗೆ ಒಂದಿಷ್ಟು ದುಃಖಬಾರದಂತೆ, ಕಷ್ಟಕೊಡದಂತೆ ಚೆನ್ನಾಗಿ ನೋಡಿಕೊಳ್ಳಬೇಕೆಂದು ಹೇಳಿ ಇದನ್ನು ವಧು ಸಂಪೂರ್ಣ ಒಪ್ಪಿದ ಮೇಲೆ ದಾರಿಯನ್ನು ಬಿಡುವನು. ಆಗ ವರ ತನಗೆ ಸಾಧ್ಯವಾದಷ್ಟು ಬಂಗಾರ ಮತ್ತು ಹಣವನ್ನು ವಧುವಿಗೆ ನೀಡುವನು. ಈ ರೀತಿಯಾಗಿ ಚಪ್ಪರ ದಿನದಿಂದ ವಧು ವರನ ಮೆನಗೆ ಹೋಗುವವರೆಗೆ ಚಾಚೂ ತಪ್ಪದಂತೆ ಶಾಸ್ತ್ರ ಸಂಪ್ರದಾಯಗಳನ್ನು ಪಾಲಿಸುವರು. ಈ ಪೂಜೆಗಳೆಲ್ಲಾ ಪಡಸಾಲೆ/ ನಡು ಮನೆಯಲ್ಲಿ ಅಥವಾ ಅಂಗಳ (ಹೊರಾಂಗಣ) ದಲ್ಲಿ ಸ್ವಲ್ಪ ದೇವರ ಕೋಣೆಯಲ್ಲಿ ಜರುಗುತ್ತವೆ.

ಕೇವಲ ಕೊಡವ ಜನಾಂಗದಲ್ಲಿಯೇ ನಡೆಸಲ್ಪಡುವ ವಿಭಿನ್ನವಾದ ಹಾಗೂ ಸಾಹಸಿಗರ ಮದುವೆ ಇದಾಗಿದೆ.

ಕೊಡವರು ತಮ್ಮದೇ ಆದ ಸಾಂಸ್ಕೃತಿಕ, ಧಾರ್ಮಿಕ ಸಾಮಾಜಿಕ, ಆರ್ಥಿಕವಾದ ಭದ್ರತೆಯುಳ್ಳಂತೆ ಇವರು ಧೈರ್ಯ, ಸಾಹಸಕ್ಕೆ ಹೆಸರಾದವರು ಕೊಡವರು ಮನೆಗೊಬ್ಬನಂತೆ ದೇಶಕಾಯುವ ಕೆಲಸಕ್ಕೆ (ಯೋಧರಾಗಿ) ನೇಮಿಸಿಕೊಳ್ಳುವ ರೀತಿ ನಾವು ಇವತ್ತಿಗೂ ಕಾಣಬಹುದಾಗಿದೆ. ಪುರುಷರಿಗೆ ಸಾಹಸವೇ ಭೂಷಣವೆಂಬುದು ಇವರ ನಂಬಿಕೆ. ತಮ್ಮ ಹೆಂಡತಿ ಮಕ್ಕಳನ್ನು. ಕುಟುಂಬವನ್ನು, ಸ್ತ್ರೀಯರನ್ನು ನಾಡನ್ನು ದುಷ್ಟ ಮೃಗಗಳಿಂದ. ಮನುಷ್ಯರಿಂದ ರಕ್ಷಿಸುವುದು ಅವರ ಆದ್ಯ ಕರ್ತವ್ಯವೆಂದು ತಿಳಿದು ಅವರಲ್ಲಿ ಚಿಕ್ಕಂದಿನಿಂದಲೇ. ಹೋರಾಡುವ ಕೆಚ್ಚನ್ನ ತುಂಬುತ್ತಾರೆ ಅದರಲ್ಲಿ ಧೈರ್ಯ, ಸಾಹಸಗಳನ್ನು ತುಂಬುತ್ತಾರೆ. ಕಾರಣ ಕೊಡಗು ಪರ್ವತ ಶಿಖರ, ಬೆಟ್ಟ-ಗುಡ್ಡ, ಗಿರಿ-ಕಂದರಗಳಿಗೆ ಹೆಸರುವಾಸಿಯಾಗಿದ್ದು ಇಲ್ಲಿ ಕ್ರೂರ ಪ್ರಾಣಿಗಳಾದ ಸಿಂಹ, ಆನೆ. ಹುಲಿ ಕರಡಿ ಚಿರತೆ ಮತ್ತು ಜಲಚರ ಪ್ರಾಣಿಗಳು ಜೀವಿಸುತ್ತವೆ. ಕಾಡು ಹತ್ತಿರವಿರುವ್ಯದರಿಂದ ಮನುಷ್ಯ ಪ್ರಾಣಿ ಜೀವಿಸುವುದು ಕಷ್ಟ. ಏಕೆಂದರೆ ಊರು, ಕೇರಿ, ನಾಡುಗಳೂ ಈ ಕಾಡಿಗೆ ಹತ್ತಿರವಾಗಿಯೇ ಇವೆ. ಇದರಿಂದ ತೋಟ, ಗದ್ದೆ, ಕೆಲಸಮಾಡಲು ಒಂದು ಸ್ಥಳದಿಂದ ಮತ್ತೊಂದು ಊರಿಗೆ ಹೋಗಿಬರಲು ಕಷ್ಟಕರವಾಗುತ್ತಿತ್ತು. ಭಯ ಬೆನ್ನ ಹಿಂದೆಯೇ ಕಟ್ಟಿಕೊಂಡಂತೆ ಜನರಿಗೆ ಭಾಸವಾಗುತ್ತಿತ್ತು. ಇದರಿಂದ ಈ ಪೂರ್ವಿಕರು ತಮ್ಮೊಳಕೆ ಪರಿಹಾರವನ್ನು ಕಂಡುಕೊಳ್ಳಲು  ಮುಂದಾದರು. ಅದರ ಪರಿಣಾಮವಾಗಿ ತೋಟ, ಗದ್ದೆ, ನಾಶಮಾಡುವುದರ ಜೊತೆಗೆ ಮನುಷ್ಯರನ್ನು ಕೊಲ್ಲುತ್ತಿದ್ದ ಕ್ರೂರಮೃಗಗಳ ಬೇಟೆಗೆ ಊರಿನ ಸಾಹಸಿಗಳು ಒಬ್ಬರೇ ಅಥವಾ ಗುಂಪಾಗಿ ತೆರಳಬೇಕಿತ್ತು. ಹಾಗೇ ಹೋಗುವಾಗ ತಮ್ಮ ಜೊತೆಯಲ್ಲಿ ತರಬೇತಿ ಹೊಂದಿದ ನಾಯಿಯನ್ನು ಮತ್ತು ಕೋವಿಯನ್ನ ಒಯ್ಯುತ್ತಿದ್ದರು ಬೇಟೆಗೆ ಹೋದವರೆಲ್ಲರ ಮೃಗವನ್ನು (ಹುಲಿಯನ್ನು) ಕೊಲ್ಲಲಿಕ್ಕೆ ಆಗುವುದಿಲ್ಲ ಅದು ಒಬ್ಬರ ಬೇಟೆಯಿಂದಲೇ ಸಾಯುವುದು ಆಗ ಅದು ಯಾರ ಕೋವಿಗೆ ಬಲಿಯಾಗಿರುತ್ತದೆ. ಆಗ ಸಾಧ್ಯವಾದರೆ ಆ ಹುಲಿಯನ್ನು ಗಾಡಿಯ ಮುಖಾಂತರವೋ ಅಥವಾ ತಲೆಯ ಮೇಲೆಯೋ ಹೊತ್ತು ಕಾಡಿನಿಂದ -ನಾಡಿಗೆ ತರುತ್ತಾರೆ. ಸಾಧ್ಯವಿಲ್ಲದಿದ್ದರೆ ಆ ಹುಲಿಯ ಬಾಲವನ್ನೋ ಅಥವಾ ಚರ್ಮವನ್ನೊ ಕತ್ತರಿಸಿ ತಂದು ಅದರ ಜೊತೆಯಲ್ಲಿ ಹುಲಿ ಕೊಂದವನ ಮದುವೆ ಮಾಡುತ್ತಾರೆ, ಇದು ಆತನ ಶೌರ್ಯ, ಸಾಹಸಗಳನ್ನು ಮೆರೆಯಿಸುವ ಉದ್ದೇಶವನ್ನು ಹೊಂದಿದೆ. ಈ ವಿವಾಹ ಇತರ ಜನಾಂಗದವರಲ್ಲಿ, ಇತರೆಡೆಗಳಲ್ಲಿ ನಡೆಯುವ ವಿವಾಹವೇ ಅಲ್ಲದೆ ಅವರಲ್ಲೇ ನಡೆಸಲ್ಪಡುವ ಇತರ ವಿವಾಹ ಪ್ರಕಾರಗಳಾದ ಕನ್ನಿಮಂಗಲ ಕೊದಿಮಂಗಲ, ಕೂಡಾವಳಿ, ಮಕ್ಕಪರಿಜೆ. ಕುಟ್ಟಪರಿಜೆ, ಒಕ್ಕಪರಿಜೆ, ಕೆಮಿಕುತ್ತಿ ಮಂಗಲ ಮತ್ತು ಪೈತಾಂಡೆಕಳಿಪ ಮಂಗಲ ವಿವಾಹಗಳಿಗಿಂತ ಹೆಚ್ಚು ವಿಭಿನ್ನವಾಗಿದೆ. ಯಾಕೆಂದರೆ ಯಾವುದೇ ವಿವಾಹದಲ್ಲಿ ಗಂಡು -ಹೆಣ್ಣು ಇಬ್ಬರು ಇರಬೇಕಾಗಿರುತ್ತದೆ ಆದರೆ ಇಲ್ಲಿ ಗಂಡನೊಂದಿಗೆ ಹೆಣ್ಣಿನ ಬದಲಾಗಿ ಇಲ್ಲಿ ಕಾಡಿನ ರಾಜನೆನಿಸಿಕೊಂಡ ಕ್ರೂರಮೃಗವಾದ (ಹುಲಿ) ಪ್ರಾಣಿಯೊಂದಿಗೆ ವಧುವಾಗಿರುವ ಪದ್ಧತಿ ನಿಜಕ್ಕೂ ವಿಚಿತ್ರ ಹಾಗೂ

ಆಶ್ಚರ್ಯಕರವಾದದ್ದು. ಈ ಪದ್ಧತಿಯನ್ನೆ ನರಿಮಂಗಲ ಎನ್ನುವರು ನರಿ ಎಂದರೆ ಹುಲಿ, ಮಂಗಲ ಎಂದರೆ ಮದುವೆ. ಹುಲಿಯೊಂದಿಗೆ ನಡೆಯುವ ವಿವಾಹವೇ ನರಿಮಂಗಲ, ಪುಲಿಮಂಗಲ. / ಹುಲಿಮಂಗಲವೆಂದು ಕರೆಯುವರು. ಹುಲಿಬೇಟೆಯಾಡಿ ಬಂದ ದಿವಸ ಇಲ್ಲವೇ ಮೂರನೇಯ ದಿವಸ ಈ ಸಂಭ್ರಮ ನಡೆಯುವ ಪದ್ಧತಿ ಕೊಡಗಿನಲ್ಲಿಯೇ ಅನೇಕ ದಶಕಗಳಿಂದಲೂ ವಾಸವಾಗಿರುವ ಗೌಡ, ಅರೆಭಾಷೆಗೌಡ, ಲಿಂಗಾಯತ, ಮಲಯಾಳಿ, ತಮಿಳು, ಕೆಂಬಟ್ಟ, ಕಾಪಾಳ, ಯರವ. ಪರಿಶಿಷ ಜಾತಿ ಮತ್ತು ಇತರೆ ವರ್ಗಗಳಲ್ಲಿ ಕಂಡುಬಂದಿಲ್ಲ. ಕೇವಲ ಕೊಡವರಲ್ಲಿ ಮಾತ್ರ ಪ್ರಚಲಿತವಿದ್ದದು.

**ನರಿಮಂಗಲದ ಆಚರಣೆ:**

ಹುಲಿ ಬೇಟೆಯಾಡಿ ಬಂದವನನ್ನು ಮನೆಯಲ್ಲಿ, ಊರಲ್ಲಿ ಎಲ್ಲರೂ ಗೌರವದಿಂದ, ಪ್ರೀತಿಯಿಂದ ಕರೆತರುತ್ತಾರೆ. ಮನೆಯವರು ಕ್ಷೌರಿಕನನ್ನು ಕರೆಯಿಸಿ ಅವನಿಂದ ಆ ವ್ಯಕ್ತಿಗೆ ಕ್ಷೌರ ಮಾಡಿಸುತ್ತಾರೆ. ನಂತರ ಸಂಪ್ರದಾಯದ ಉಡಿಗೆಗಳಾದ ಬಿಳಿ ಕುಪ್ಪಸ ತೊಟ್ಟು, ತಲೆಗೆ ಕೆಂಪು ರೇಷ್ಮೆ ವಸ್ತ್ರವನ್ನು ಕಟ್ಟಿಕೊಂಡು ಶೃಂಗಾರ ಮಾಡುತಾರೆ. ಕನ್ನಿಮಂಗಲ ವಿವಾಹ ಪದ್ಧತಿಯಲ್ಲಿ ಭೋಜಕಾರನಾಗಿ 'ಭಾವಮೈದುನ' ಪಕ್ಕದಲ್ಲಿದ್ದರೆ ಈ ವಿವಾಹದಲ್ಲಿ ಆತನ ಆಪ್ತ ಸ್ನೇಹಿತ ಅಥವಾ ಬೇಟೆಯಲ್ಲಿ ಜೊತೆಯಾಗಿ ಬಂದವನು ಭೋಜಕಾರನಾಗಿರುತ್ತಾನೆ. ವರ ಅವರ ಪದ್ಧತಿಯಂತೆ ನಡುಮನೆಯಲ್ಲಿರುವ 'ನೆಲ್ಲಕಿ ನಡುಬಾಡೆಗೆ' ಅಕ್ಷತೆ ಹಾಕಿ ಕೈಮುಗಿಯುವನ್ನು ನಂತರ ಹಿರಿಯರಿಗೆ ಪಾದಮುಟ್ಟಿ ನಮಸ್ಕರಿಸುವನು.

ಈ ಸಮಾರಂಭದಲ್ಲಿ ಕುಟುಂಬದ ಸದಸ್ಯರು, ರಕ್ತಸಂಬಂಧಿಗಳು. ಊರಿನವರು ಪಾಲ್ಗೊಳ್ಳುತ್ತಾರೆ. ಸಂಪ್ರದಾಯದಂತೆ ಹತ್ತಿಮರದ/ಹಾಲು ಬರುವ ಏಳುಕಂಬಗಳನ್ನು ತಂದು ಐದು ಕಡೆಗಳಲ್ಲಿ ನಿಲ್ಲಿಸಿ ಅವುಗಳ ಮೇಲೆ ಬೇರೆ ಬೇರೆ ಗಿಡದ ಸೊಪ್ಪನ್ನು ಹಾಕುವರು ಅಲಂಕಾರಕ್ಕೆ ಮಾವಿನ ಮತ್ತು ಹೂವನ್ನು ಸೇರಿಸಿ ತೋರಣವನ್ನು ಕಟ್ಟುವರು. ಅದರೊಂದಿಗೆ ಮನೆಯನ್ನು ಶೃಂಗರಿಸಿರುವರು. ನೋಡಲು ಸಮಾರಂಭವಿದೆ ಎಂದು ಕಾಣುವಂತೆ ಅಲ್ಲಿನ ತಯ್ಯಾರಿ ಇರುತ್ತದೆ, ಮಂಟಪದಲ್ಲೂ ಇತರ ವಿವಾಹಗಳಲ್ಲಿನಂತೆ ಎಲ್ಲಾ ಮಂಗಳ ವಸ್ತುಗಳು ಇರುತ್ತವೆ. ಅಥವಾ ಇತರ ವಿವಾಹಗಳಲ್ಲಿನಂತೆ ಶೃಂಗಾರಗೊಂಡ ವರ ಕೈಯಲ್ಲಿ ಕೋವಿಯನ್ನು ಹಿಡಿದುಕೊಂಡಿರುತ್ತಾನೆ ಆಗ ಊರಿನ ಎಲ್ಲಾಜನ ಸೇರಿ ಆತನನ್ನು ಮೆರವಣಿಗೆಯ ಮುಖಾಂತರ ಚಪ್ಪರಕ್ಕೆ ಒಯ್ಯುತ್ತಾರೆ. ಆ ಸಂದರ್ಭದಲ್ಲಿ ಅನೇಕ ವಾದ್ಯಗಳನ್ನು ಬಾರಿಸಿಕೊಂಡು ನಡೆಯುವರು, ಚಪ್ಪರದೊಳಗೆ ಹುಲಿಕೊಂದ ವ್ಯಕ್ತಿಯನ್ನು ಕರೆದು ಎಡಗಡೆ ಕುಳಿತುಕೊಂಡು ಕೈಯಲ್ಲಿ ಕೋವಿಯನ್ನು ಹಿಡಿದಿಡುತ್ತಾನೆ. ಬಲಗ್ಗಡೆ ಸತ್ತಿರುವ ಹುಲಿ, ಚರ್ಮ ಅಥವಾ ಕತ್ತರಿಸಿ ತಂದ ಬಾಲವನ್ನು ಇಟ್ಟು ಹೂಮಾಲೆ ಹಾಕಿ ಶೃಂಗಾರ

ಮಾಡಿರಲಾಗುತ್ತದೆ. ಆಗ ವರ ಮತ್ತು ಹುಲಿಯ ಮೇಲೆ ಸಮಾರಂಭದಲ್ಲಿ ಸೇರಿದವರೆಲ್ಲಾ ಅಕ್ಷತೆಯನ್ನು ಹಾಕಿ ವರನಿಗೆ ಆಶೀರ್ವಾದ ಮಾಡುತ್ತಾರೆ. ಈ ಮದುವೆ ಸಂದರ್ಭದಲ್ಲಿ ಪ್ರಮುಖವಾಗಿ 'ದುಡಿ' ಎಂಬ ವಾದ್ಯ ಬಾರಿಸುತ್ತಾರೆ.

ಈ ಮದುವೆ ಒಟ್ಟಿನಲ್ಲಿ ಹುಲಿಕೊಂದ ವೀರನ ಸಾಹಸ ಪ್ರದರ್ಶನಕ್ಕಾಗಿ ಏರ್ಪಡಿಸಿಕೊಂಡ ಪದ್ಧತಿ ಬಹು ವಿಶಿಷ್ಟವಾದದ್ದು, ವೀರ ಯೋಧರಿಗೆ ಜನ್ಮನೀಡುವ ತಾಣದಲ್ಲಿ ಈ ವಿವಾಹಕ್ಕೆ ಹೆಚ್ಚಿನ ಪ್ರಾಶಸ್ತ್ಯವಿದೆ. ಅಲ್ಲದೆ, ಇದೊಂದು ಕೊಡಗಿನ ಸಾಮಾಜಿಕ ನೆಲೆಯ ಹಿರಿಮೆಯಾಗಿ ಬೆಳೆದುಕೊಂಡು ಬಂದಿದೆ.

**ಕೂಡಾವಳಿ:**

ಕೇವಲ ಕೊಡಗಿನಲ್ಲೇ ಜಾರಿಯಲ್ಲಿರುವ ಆದರೆ ಎಲ್ಲಾ ಸಮಾಜದ ಆಶಯವಾಗಿರುವ ಈ ಪದ್ಧತಿ ಹೆಣ್ಣಿಗೆ ಬಾಳುವ ಸ್ವಾತಂತ್ರ್ಯ ನೀಡುವಂತಹುದು ಹೆಣ್ಣು ಮದುವೆಯಾದ ನಂತರ ಕೆಲ ದಿನ ಅಥವಾ ತಿಂಗಳುಗಳಲ್ಲೆ ಆಕೆಯ ಗಂಡ ಅಕಾಲ ಮರಣಕ್ಕೆ ತುತ್ತಾಗಿ ಆಕೆ ವಿಧುವೆಯಾಗಿ ಸಾಮಾಜಿಕ, ಸಾಂಸ್ಕೃತಿಕ ಆಚರಣೆಗಳಲ್ಲಿ ಪಾಲ್ಗೊಳ್ಳುವ ಹಕ್ಕು ಮತ್ತು ಇತರರಂತೆ ಬಾಳುವ ಸ್ವಾತಂತ್ರ್ಯ ಕಳೆದುಕೊಂಡು ಅರೆಜೀವವಾಗಿ ಇದ್ದು ಸತ್ತಂತೆ ಬಾಳಬಾರದೆಂಬ ಧ್ಯೇಯದಿಂದ ಮತ್ತೆ ಅವಳು ಇತರ ಸ್ತ್ರೀಯರಂತೆ ಸಮಾಜದಲ್ಲಿ ತಲೆಚುತ್ತಿ ಬಾಳಲು ಅವಕಾಶ ಮಾಡುವ ಪುರ್ನವಿವಾಹ ಪದ್ಧತಿಯಾಗಿದೆ ಆದರೆ ಇಲ್ಲಿ ಅದು ನಡೆಯುವ ಬಗ್ಗೆ ವಿಭಿನ್ನವಾದದ್ದು ಈ ವಿವಾಹಕ್ಕೆ ಹೆಚ್ಚಿನ ಕಟ್ಟು – ಪಾಡುಗಳ ಶಾಸ್ತ್ರಗಳಿಲ್ಲ. ಈ ವಿವಾಹ ಒಂದು ಒಪ್ಪಂದವಾಗಿದ್ದು ಆಕೆಯ ಗಂಡನ ರಕ್ತಸಂಬಂಧವಾದ ತಮ್ಮ ಅಥವಾ ಅಣ್ಣನೊಂದಿಗೆ ಅಥವಾ ಒಕ್ಕ (ಕುಟುಂಬ)ದ ಯಾರಾದರೊಬ್ಬರೊಂದಿಗೆ ನಡೆಯುತ್ತದೆ. ಇಲ್ಲಿ ಆಕೆ ಗಂಡನ ಅಣ್ಣ ತಮ್ಮರೊಂದಿಗೆ ನಡೆಯುವ್ವದರಿಂದ ಇದು ಸಮಾಜದ ಮನ್ನಣೆಗೂ ಹೆಚ್ಚು ಪಾತ್ರವಾಗಿಲ್ಲ ಯಾಕೆಂದರೆ ನಮ್ಮ ಭಾರತೀಯ ಸಂಸ್ಕೃತಿಯಲ್ಲಿ ಅಣ್ಣ ಮತ್ತು ಅಣ್ಣನ ಮಡದಿಯನ್ನು ತಂದೆತಾಯಿಯರೇಂದೆ ಭಾವಿಸುತ್ತಾರೆ. ಅಂದ್ರೆ ತಾಯಿಯೊಂದಿಗೆ ಮದುವೆಯಾಗುವುದು ಮಾನವನ ನೈತಿಕ ಮೌಲ್ಯಕ್ಕೆ ವಿರುದ್ಧವಾದ ಪದ್ಧತಿಯೆಂಬ ಭಾವನೆ ನಮ್ಮ ಸಮಾಜದಲ್ಲಿ ಏನ್ನೋ ಕೊಡವರು ಈ ಪದ್ಧತಿ ಅನುಸರಿಸಿದ್ದಾರೆ. ಇದರ ಹಿಂದಿನ ಆಶಯ ನಮ್ಮ ಸಮಾಜದಲ್ಲಿ ಒಪ್ಪಿತವಾಗಿದೆ ಆದರೆ ಅದು ಗಂಡನ ಸಹೋದರರೊಂದಿಗೆ ನಡೆಯುವುದು ಮಾತ್ರ ಒಪ್ಪದ ಅಂಶ. ಯಾವುದೇ ವಿಷಯ ಒಂದು ರೀತಿಯಲ್ಲಿ ಆದರಿಸಿಕೊಂಡ ಮೇಲೆ, ಅದನ್ನು ಮತ್ತೊಂದು ಭಾವನೆಯಿಂದ ಒಪ್ಪಿಕೊಳ್ಳವುದು ಕಷ್ಟ.

**ಈ ವಿವಾಹದ ಆಚರಣೆ:**

ಕೂಡಾವಳಿ ನಡೆಯುವಾಗ ಸ್ತ್ರೀಯ ತನ್ನವಿಧವೆ ರೂಪದಲ್ಲಿಯೇ ಇರುತ್ತಾಳೆ. ಅಂದರೆ ಬಿಳಿಸೀರೆ ಬಿಳಿ ರವಿಕೆ ಹಾಕಿರುತ್ತಾಳೆ ಅವಳು ಯಾವುದೇ ಅಲಂಕಾರ

ಮಾಡಿಕೊಂಡಿರುವುದಿಲ್ಲ. ಇಲ್ಲಿ ಆಕೆಯನ್ನು ಮೆರವಣಿಗೆ ಮುಖಾಂತರವು ಒಯ್ಯುವುದಿಲ್ಲ ವಾದ್ಯೋಪಕರಣಗಳ ಬಳಕೆಯಿಲ್ಲ ಕೆಲವು ಜನರಿಗೆ ಮಾತ್ರ ಮದುವೆಗೆ ಆಹ್ವಾನಿಸುತ್ತಾರೆ. ಅಂದರೆ ಒಟ್ಟಾರೆಯಾಗಿ ಹೆಣ್ಣಿಗೆ ಹಕ್ಕಿಲ್ಲ. ಅಲ್ಲದೆ ಇಲ್ಲಿ ಗಂಡನಿಗೆ ಇದು ಮೊದಲನೆಯ ಬಾರಿಯ ವಿವಾಹವಾಗಿರಬಹುದು/ ಎರಡನೇಯ ವಿವಾಹವಾಗಿರಲು ಬಹುದಾಗಿದ್ದು ಯಾವುದೇ ಸನ್ನಿವೇಶದಲ್ಲಿದ್ದರು ಅವನಿಗೆ ಸಂಪೂರ್ಣ ಸ್ವಾತಂತ್ರ್ಯವುಂಟು.

ಏನೇ ಆಗಲಿ ವಿಧವಾ ಸ್ತ್ರೀಗೆ, ವಿವಾಹ ವಿಚ್ಛೇದಿತ ಸ್ತ್ರೀಗೆ ಮತ್ತೆ ಪತಿಯನ್ನು ಪಡೆಯುವ ಹಕ್ಕಂತು ಬುಡಕಟ್ಟು ಜನಾಂಗಗಳಿಂದಲೂ ಅಥವಾ ಹಿಂದಿನ ಕಾಲದಲ್ಲೂ ಇತ್ತು ಎಂಬುದನ್ನು ಈ Contract Base Marriage ಎಂದೇ ಹೇಳಬಹುದಾದ ಕೊಡವರ ಕೂಡಾವಳಿ ಮದುವೇ ತಿಳಿಸುತ್ತದೆ. ಇದನ್ನೆ ಅನೇಕ ಸಮಾಜ ಸುಧಾರಕರು ಬಯಸುತ್ತಾರೆ. ಅಲ್ಲದೆ ಈ ಜಾಗತೀಕರಣದ ಪ್ರಪಂಚದಲ್ಲೂ ಕೆಲವೆಡೆ ಸಾಮಾನ್ಯವಾಗಿ ನಡೆಯುತ್ತಲೆ ಇರುತ್ತಿದ್ದರೆ. ಇನ್ನು ಕೆಲವಡೆ ಅವಳು ಬೇರೊಬ್ಬನ ಗಂಡನಾಗಬೇಕಾದರೂ ಮತ್ತೆ ಅದೇ ಮನೆಯ ಸೊಸೆಯಾಗಿಯೇ ಉಳಿಯಬೇಕು, ಆ ಮನೆಯ ವಂಶವೃಕ್ಷನ್ನೆ ಬೆಳೆಸಬೇಕೆಂಬುದೇ ಅವರ ಆಶಯ ಹಾಗಾಗಿ ಅದೇ ಒಕ್ಕ (ಕುಟುಂಬ)ದ ವ್ಯಕ್ತಿಯೊಂದಿಗೆ ಗಂಡನ (ಸಹೋದರರೊಂದಿಗೆ) ಕೂಡಾವಳಿ ಮಾಡಿಕೊಳ್ಳಬೇಕು.

**ಕೊದಿಮಂಗಲ ವಿವಾಹ:**

ಬಾಲ್ಯ ವಿವಾಹ ಪದ್ಧತಿಯಂತೆ ಇರುವ ಈ ವಿವಾಹ ಇತರ ಜನಾಂಗದಲ್ಲಿನಂತೆ ಮಕ್ಕಳ ಇಡೀ ಜೀವನ ಹಾಳು ಮಾಡುವುದಲ್ಲ ಅಂದರೆ ಏನು ತಿಳಿಯದ ಮುಗ್ಧ ಮಕ್ಕಳಿಗೆ ಮದುವೆಯೆಂದರೆ ಜೀವನ ಸಂಗಾತಿಯೆಂದರೇನು ತಿಳಿಯದ ವಯಸ್ಸಿಗೆ ಅವರಿಬ್ಬರನ್ನು ಜೀವನವಿಧಿ ಆ ಬಂಧನದಲ್ಲಿ ಕೂಡಿ ಹಾಕುತ್ತಾರೆ. ಆದರೆ ಅವರಿಬ್ಬರು ಪ್ರೌಢಾವಸ್ಥೆಗೆ ಅಥವಾ ಯೌವ್ವನಾವಸ್ಥೆಗೆ ಬಂದ ಅವರವರ ಸಂಗಾತಿಗಳು ಅವರಿಗೆ ಇಷ್ಟವಾದರೆ ಸರಿ, ಅವರಿಬ್ಬರ ಜೀವನ ಹಾಲಜೇನು ಇಲ್ಲವಾದರೆ ಹಿರಿಯರು ಮಾಡಿದ ತಪ್ಪಿಗೆ ಅವರ ಜೀವನ ಪ್ರೀತಿ ಮರಿಚಿಕೆಯ ಮರುಭೂಮಿಯಲ್ಲೆ ಜೀವನ ಕಳೆಯುವ ಅನಿವಾರ್ಯತೆಯಿತ್ತು. ಆದರೆ ಈ ಮದುವೆಯ ಹಿಂದೆ ಹಿರಿಯರಲ್ಲಿ ಯಾವುದೇ ದುರುದ್ದೇಶವಿರಲಿಲ್ಲ. ಮಕ್ಕಳನ್ನು ಮದುವೆ ಮಾಡಿ ನೋಡಬೇಕೆಂಬ ಹಂಬಲದಿಂದ ಈ ಪದ್ಧತಿ ಅಳವಡಿಸಿಕೊಂಡಿದ್ದರು. ಶೈಕ್ಷಣಿಕ ಕ್ಷೇತ್ರ ವಿಸ್ತರಿಸಿಕೊಂಡಂತೆ ಇದು ನಿಂತುಹೋಗಿದೆ ಆದರೆ ಈ ವ್ಯವಸ್ಥೆ ಕೊಡವರಲ್ಲಿ ಯಾವುದೇ ಸಮಸ್ಯೆಗಳನ್ನುಗಲಿ ಅಥವಾ ಮಕ್ಕಳ ಮನಸ್ಸನ್ನು ಕದಡಿಸದೇ ಇದೊಂದು ಮಕ್ಕಳ ಶೃಂಗಾರಗೊಳಿಸಿ ಅವರು ಮದುವೆ ಸಂದರ್ಭವನ್ನು ನೇರವೇರಿಸುತ್ತಿದ್ದರಷ್ಟೇ ಇಲ್ಲಿ ಯಾರಿಗೂ ಯಾವುದೇ ರೀತಿಯ ಬಂಧನವನ್ನು ಕಲ್ಪಿಸುವುದಾಗಿಲ್ಲ. ಅದಕ್ಕಾಗಿ ಹತ್ತು ವರ್ಷಮೀರದ ಮಕ್ಕಳನ್ನು ಕೇವಲ ಒಬ್ಬರನ್ನೆ ಮದುವೆ ಮಾಡುತ್ತಿದ್ದರು ಅಂದರೆ ಇಲ್ಲಿ ಹೆಣ್ಣು – ಗಂಡಿನ ಜೋಡಿಗಳು ಇರುವುದಿಲ್ಲ. ಹೆಣ್ಣು ಮಗುವನ್ನು ಅಥವಾ ಗಂಡು ಮಗುವನ್ನು ಮಾತ್ರ ಕೂರಿಸಿ

ಮುದುವೆಯ ಎಲ್ಲಾ ಶಾಸ್ತ್ರ ಸಂಪ್ರದಾಯಗಳೊಂದಿಗೆ ಬಂಧು – ಬಳಗದವರನ್ನು ಕರೆಯಿಸಿ ಒಂದೇ ದಿನದಲ್ಲಿ ವೈಭವದಿಂದ ನೇರವೇರಿಸುತ್ತಾರೆ. ಇಲ್ಲಿರುವ ಇನ್ನೊಂದು ಆಶ್ಚರ್ಯವೆಂದರೆ ಹೆಣ್ಣು ಮಗುವಿದ್ದರೆ ಗಂಡು ಮಕ್ಕಳ ಕೊಡವ ಸಂಪ್ರದಾಯದ ಉಡಿಗೆ ಧರಿಸಿ ಮದುವೆ ಮಾಡುತ್ತಿದ್ದರು. ಇಲ್ಲಿಯೂ ಮದುವೆಯ ಭರ್ಜರಿ ಊಟವಿರುತ್ತದೆ. ಮದುವೆಯಲ್ಲಿ ಪಾಲ್ಗೊಂಡವರು ವಧು ಅಥವಾ ವರನಿಗೆ ಹಣವನ್ನೋ ಅಥವಾ ಅವರಿಗೆ ಇಷ್ಟವಾದ ಉಡುಗೊರೆಗಳನ್ನು ಕೊಟ್ಟು ತೆರಳುತ್ತಿದ್ದರು.

ಈ ಒಂದು ವಿವಾಹ ವಧುವಿಲ್ಲದೆ – ವರನ ಅಥವಾ ವರನಿಲ್ಲದೆ – ವಧು ಮಾತ್ರವಿದ್ದು ಅಂದರೆ ಸಂಗಾತಿಯಿಲ್ಲದೇ ಜರುಗುತ್ತಿತ್ತು. ವಿವಾಹವೆಂದಾಕ್ಷಣ ತಮ್ಮ ಜೀವನ ಸಂಗಾತಿಯನ್ನು ಧರ್ಮದ ಕಟ್ಟಳೆಯಲ್ಲಿ ನಿಂತು ಆರಿಸಿಕೊಳ್ಳವುದು. ಲೈಂಗಿಕ ಸುಖವನ್ನು ಪಡೆಯುವುದು ಹಾಗೂ ತಮ್ಮ ವಂಶವೃಕ್ಷವನ್ನು ಬೆಳೆಸುವುದು ಎಂದೇ ಕರ್ನಾಟಕದಲ್ಲೆ ಅಲ್ಲಾ ನಮ್ಮ ಭಾರತೀಯ ಸಂಸ್ಕೃತಿಯಲ್ಲಿಯೇ ಬೆಳೆದು ಬಂದ ಪರಿಕಲ್ಪನೆಯಾಗಿದೆ. ಆದರೆ ಈ ವಿವಾಹದ ರೀತಿಯೇ ಇದಕ್ಕೆ ವಿರುದ್ಧವಾದಂತಿದೆ, ಅಲ್ಲದೆ ಒಂದು ಲಿಂಗದ ಮಗುವನ್ನು ಇನ್ನೊಂದು ಲಿಂಗದ್ದಾಗಿ ಪರಿವರ್ತಿಸಿ ಮಾಡುವುದು ಇನ್ನೊಂದು ಆಶ್ಚರ್ಯದ ಸಂಗತಿಯೇ ಸರಿ, ಹಾಗೂ ಇಲ್ಲಿ ಮದುವೆಯಿಂದ ಒಂದು ಮನೆಗೆ ಸೊಸೆಯೋ ಅಥವಾ ಅಳಿಯನೋ ಬರುವುದು ಇಲ್ಲ, ಆದರೂ ಇಲ್ಲಿ ವಿವಾಹ ನಡೆಯುತ್ತದೆ. ಅದೇ ಕೊದಿಮಂಗಲದ ವಿಶ್ಲೇಷಣೆಯಾಗಿದೆ. ಆದರೂ ಈ ಪದ್ಧತಿ ಎಲ್ಲರೂ ಮಾಡಲಾರರ ಒಂದೇ ಜಾತಿ – ಜನಾಂಗದ ಜನರಿದ್ದರು ಒಬ್ಬರು ಮಾಡಬಹುದು, ಇನ್ನೊಬ್ಬರು ಮಾಡದೇ ಇರಬಹುದು.

**ಒಕ್ಕಪರಿಜೆ ಮಂಗಲ:**

ಗಂಡು ಸಂತಾನವಿಲ್ಲದಿದ್ದರೆ ತಮ್ಮ ವಂಶ ಅಭಿವೃದ್ಧಿಯಾಗದು ಗಂಡು ಮಕ್ಕಳಿಂದಲೇ ಮೋಕ್ಷ ದೊರಕುವುದೆಂಬ ಭಾವನೆವುಳ್ಳ ನಮ್ಮ ನೆಲದ ಸಂಸ್ಕೃತಿಯಲ್ಲಿ ಯಾರಿಗೆ ಗಂಡು ಮಕ್ಕಳು ಜನಿಸುವುದಿಲ್ಲವೋ ಅಥವಾ ಜನಿಸಿ ಅಕಾಲ ಮರಣಕ್ಕೆ ತುತ್ತಾದರೆ ಆಮನೆಯಲ್ಲಿ ಈಗ ಕೇವಲ ಹೆಣ್ಣು ಸಂತಾನವಿದ್ದು ಅವಳ ಮದುವೆಯಾದ ಮೇಲೆ ಅವಳು ಗಂಡನ ಮನೆಗೆ ಹೋದರೆ ಆ ಮನೆ ಕತ್ತಲಲ್ಲಿ ಮುಳುಗಿದಂತೆ ಎಂಬ ಕಾರಣದಿಂದ ಕನ್ನಿಮಂಗಲ (ಸಾಮಾನ್ಯ ವಿವಾಹ ಪದ್ಧತಿ) ಜರುಗಿಸದೇ ಅಲ್ಲಿ ಒಕ್ಕಪರಿಜೆ ಮಂಗಲ ಜರುಗಿಸುತ್ತಾರೆ. ಒಕ್ಕಪರಿಜೆ ಮಂಗಲ ವೆಂದರೆ – ಮನೆಯಳಿಯನನ್ನು ತಂದುಕೊಳ್ಳವುದಕ್ಕಾಗಿ ನಡೆಯುವ ವಿವಾಹ.

ಎಲ್ಲಾ ವಿವಾಹದ ನಂತರ ವಧು – ವರನ ಮನೆಗೆ ಹೋಗಿ ಅಲ್ಲಿ ಅವರ ತಂದೆ, ತಾಯಿ, ಅಕ್ಕ, ತಂಗಿ, ಅಣ್ಣ, ತಮ್ಮ, ಅಜ್ಜ, ಅಜ್ಜಿ, ಚಿಕ್ಕಪ್ಪ – ಚಿಕ್ಕಮ್ಮ ಹೀಗೆ ಅನೇಕ ಸಂಬಂಧಗಳನ್ನು ತನ್ನದಾಗಿಸಿಕೊಂಡು ಬಾಳುವುದು ವಾಡಿಕೆ, ಅಲ್ಲಿ ಆ ವಧುವಿಗೆ – ವರನ ಆಸ್ತಿಯ ಮೇಲೆ ಸಂಪೂರ್ಣ ಅಧಿಕಾರವಿರುತ್ತದೆ. ಆಕೆಯು "ಕೊಟ್ಟ ಹೆಣ್ಣು

ಕುಲದ ಹೊರಗೆ", ಎಂದು ಹೇಳುವ ಹಾಗೆ ಅವಳಿಗಾಗಲಿ, ಮುಂದೆ ಅವಳಿಗೆ ಹುಟ್ಟುವ ಮಕ್ಕಳಿಗೂ ಆಕೆಯ ತವರಿನ ಮೇಲೆ ಯಾವುದೇ ಅಧಿಕಾರವಿರಲಾರದು ಇರುವುದೊಂದೆ. ಪ್ರೀತಿ, ವಾತ್ಸಲ್ಯ. ನಮ್ಮಲ್ಲಿ (ಜನಪದರಲ್ಲಿ) ಒಂದು ಒಗಟಿದೆ "ಗಂಡಿಗೆ ಒಂದು ಹೆಣ್ಣಿಗೆ ಎರಡು", ಅಂತ ಹಾಗೆಂದರೆ ಗಂಡುಮಕ್ಕಳು ಹುಟ್ಟಿದಾಗಿನಿಂದ ಸಾಯುವ ತನಕ ತಮ್ಮ ಹೆಸರಿನ ಮುಂದೆ ತಂದೆಯ ಹೆಸರನ್ನು ತಂದೆಯ Surname

ಹೊಂದಿರುತ್ತಾನೆ ಇದು ಬದಲಾಗದು ಆದರೆ ಹೆಣ್ಣು ಮದುವೆಯಾಗುವರಗೂ ತನ್ನ ಹೆಸರಿನ ಮುಂದೆ ತಂದೆಯ ಹೆಸರನ್ನು ತಂದೆಯ ಮನೆಯ Surname ನ್ನು ಹೊಂದಿದ್ದು ಮದುವೆ ನಂತರ ಗಂಡನ ಹೆಸರನ್ನು ಗಂಡನ ಮನೆಯ Surname ಹೊಂದಿರುತ್ತಾಳೆ ಅಲ್ಲಿಗೆ ಆಯಿತಲ್ಲಾ ಎರಡು Address, ಆದರೆ ಇದಕ್ಕೆ ತದ್ವಿರುದ್ಧವಾಗುವುದೇ ಒಕ್ಕಪರಿಜೆಯ ವಿವಾಹ.

ಒಕ್ಕಪರಿಜೆ ವಿವಾಹ ಎಲ್ಲಾ ಜನಾಂಗದಲ್ಲಿ ನಡೆಯುವಂತಹ ವಿವಾಹದಂತೆ ಸಂಪ್ರದಾಯಬದ್ಧವಾಗಿ, ಶಾಸ್ತ್ರೋಕ್ತವಾಗಿ ನೆರವೇರಿಸುತ್ತಾರೆ. ಆದರೆ ಮದುವೆಯಾದ ನಂತರ ವಧು – ವರನಿಗೆ ಮನೆಗೆ ಹೋಗುವ ರೀತಿ ಅಥವಾ ಪದ್ಧತಿಯೂ ಬದಲಾಗಿ ವರ – ವಧುವಿನ ಮನೆಗೆ ಹೋಗುತ್ತಾನೆ. ವಧುವಿಗೆ ಈ ಸಂಪ್ರದಾಯದ ವಿವಾಹದಂತೆ ವರನ ಪಿತ್ರಾರ್ಜಿತ ಆಸ್ತಿಯ ಮೇಲೆ ಯಾವುದೇ ಹಕ್ಕಿರುವುದಿಲ್ಲ ಅಲ್ಲದೆ ಆಕೆಯ ಹೆಸರಿನ ಮುಂದೆ ತಂದೆಯ ಮನೆಯ Surname ನ್ನೇ ಹೊಂದಿದ್ದು ಇದನ್ನು ಗಂಡನ ಹೆಸರಿಗು ಸೇರುತ್ತೆ. ವರನಿಗೆ – ವಧುವಿನ ತಂದೆಯ ಆಸ್ತಿಯ ಮೇಲೆ ಸಂಪೂರ್ಣವಾದ ಅಧಿಕಾರವಿರುತ್ತದೆ.

ತಮ್ಮ ಕರುಳಿನ ಕುಡಿಯಿಂದ ಅದು ಹೆಣ್ಣಾಗಿರಲಿ / ಗಂಡಾಗಿರಲಿ ತಮ್ಮ ಮನೆಯ ದೀಪ ಸದ ಬೆಳಗುತ್ತಿರಬೇಕು. ವಂಶವೃದ್ಧಿಯಾಗಬೇಕೆಂದು ಆಶಯದಿಂದ ಈ ನಿರ್ಧಾರ ಕೈಗೊಂಡಿರುತ್ತಾರೆ. ಇಂಥ ವಿವಾಹಕ್ಕೆ ಆಯ್ಕೆಯಾದ ವರ ಹೆಚ್ಚಾಗಿ ಅನಾಥರು, ಬಡವರು, ಹೆಚ್ಚು ಗಂಡು ಮಕ್ಕಳುಳ್ಳ ಕುಟುಂಬದವರೇ ಆಗಿರುತ್ತಾರೆ. ಈ ವಿವಾಹ ಕೇವಲ ಕೊಡವರಲ್ಲೇ ಅಲ್ಲಾ ಎಲ್ಲಾ ಕಡೆಗು ನಡೆಯುವುದಾಗಿದೆ.

**ಮಕ್ಕಪರಿಜೆ ವಿವಾಹ:**

ಒಳ್ಳೆಯ ಉದೇಶಕ್ಕಾಗಿ ಹಾಗೂ ವೈವಾಹಿಕ ಜೀವನದ ಉದೇಶಗಳಿಗಾಗಿ ನಡೆಯಾವ ವಿವಾಹಗಳಲ್ಲಿ ಒಂದಾಗಿರುವುದೇ ಮಕ್ಕಪರಿಜೆ ವಿವಾಹ, ಒಂದು ಕುಟುಂಬ ಪರಿಪೂರ್ಣ ಎನಿಸಿಕೊಳ್ಳಬೇಕಾದರೆ ಅಲ್ಲಿ ಅಜ್ಜ – ಅಜ್ಜಿ, ತಂದೆ –ತಾಯಿ, ಮಕ್ಕಳು, ಇರಲೇಬೇಕು ಹಾಗೇ ಮಕ್ಕಳಿಲ್ಲದ ಕುಟುಂಬ ಸ್ಮಶಾನಕ್ಕೆ ಸಮ, ಮಕ್ಕಳಿರುವ ಮನೆ ಸ್ವರ್ಗಕ್ಕೆ ಸಮನಾಗಿರುತ್ತದೆ

*"ಕುಸು ಇದ್ದ ಮನೆಗೆ ಬೀಸಣಿಕೆ ಯಾತಕ*

*ಕೂಸು ಕಂದಯ್ಯಾ ಒಳಹೊರಗ/ ಆಡಿದರೆ*

*ಬೀಸಣಿಕೆ ಗಾಳಿ ಸುಳಿದಾವ".*



ಹೆಣ್ಣತನವೆನ್ನವುದು ಪರಿಪೂರ್ಣವೆನಿಸಿಕೊಳ್ಳಬೇಕಾದರೆ ಅವಳು ತಾಯಿಯಾಗಬೇಕು ಈ ಭಾಗ್ಯವಿಲ್ಲದವರು ಬಂಜೆ ಎನಿಸುತ್ತಾರೆ. ಇವರಿಗೆ ಪೂಜೆ ಪುನಸ್ಕಾರಗಳಲ್ಲಿ ಹೆಚ್ಚಿನ ಪ್ರಾಶಸ್ತ್ಯವಿಲ್ಲ ಸಮಾಜದಲ್ಲೂ ಗೌರವವಿಲ್ಲ. ಎಷ್ಟೇ ಆಸ್ತಿ ಅಂತಸ್ತು ಇದ್ದರು ಮಕ್ಕಳಿಲ್ಲವೆಂದರೆ ಅವರು ಬಡವರೇ ಅವರಿಗೆ ಸುಖ, ನೆಮ್ಮದಿಯಿಲ್ಲ. ಕೇವಲ ಹೆಣ್ಣಿಗೆ ಈ ಸಂಕಷ್ಟವಿಲ್ಲ, ಅದು ಇಡೀ ಕುಟುಂಬವನ್ನೆ ಆವರಿಸಿರುತ್ತದೆ. ಮಕ್ಕಳಿಲ್ಲವಾದರೆ ಅವರ ಆತ್ಮಕ್ಕೆ ಮುಕ್ತಿ ದೊರೆಯದು. ಅವರ ಕುಟುಂಬದ ಉತ್ತರಾಧಿಕಾರಿಗಳು ಯಾರು ಇರುವುದಿಲ್ಲ. ಪ್ರತಿಯೊಬ್ಬ ವ್ಯಕ್ತಿ ತನ್ನ ಸಂತಾನದಿಂದ ಅಮರನಾಗಿರುತ್ತಾನೆ. ಸಂತಾನವಿಲ್ಲವಾದರೆ ಅವನು ಆ ಕ್ಷಣವೇ ಮುಗಿಲ ಮರೆಯ ಬೊಂಬೆಯಾಗುತ್ತಾನೆ. ಅದಕ್ಕೆ ತಾನು ಮದುವೆಯಾದ ಹೆಂಡತಿಯಿಂದ ತನಗೆ ಸಂತಾನ ದೊರೆಯಲಿಲ್ಲ, ಅದರೆ ಅದು ಮುಂದೆಯು ಅಸಾಧ್ಯವಾದದ್ದು ಎಂದು ಗೊತ್ತಾದಾಗ ಆತ ಇನ್ನೊಂದು ವಿವಾಹಕ್ಕೆ ಮುಂದಾಗುತ್ತಾನೆ. ಕೆಲವೊಮ್ಮೆ ತಮ್ಮ ಸ್ವ-ಇಚ್ಛೇಯಿಂದ ರೆಡಿಯಾಗಬಹುದು ಇಲ್ಲವೆ ಆತನ ತಂದೆ-ತಾಯಿ ಅಥವಾ ರಕ್ತಸಂಬಂಧಿಗಳ ಒತ್ತಾಯದಿಂದ ಇರಬಹುದು, ಇನ್ನು ಕೆಲವೊಮ್ಮೆ ಆಶ್ಚರ್ಯವೆಂದರೆ ಮಕ್ಕಳಿಗಾಗಿ ಪರಿತಪಿಸುವ ಆತನ ಮಡದಿಯೇ ಆತನಿಗೆ ಒಪ್ಪಿಸಬಹುದು. ಇದು ಕಾನೂನು ಬದ್ಧವಾಗಿಯೂ ನಡೆಯಬಹುದಾಗಿದೆ. ಆದರೆ ಮಕ್ಕಪರಿಜೆ ಕೊಂಚ ವಿಭಿನ್ನವಾಗಿದ್ದು ಅದು ಇಗೀನ ಬಾಡಿಗೆ ಗರ್ಭದಿಂದ ಮಕ್ಕಳನ್ನು ಪಡೆಯುವ ವ್ಯವಸ್ಥೆಗೆ ಹೋಲುವಂತಹುದು.



ಮಕ್ಕಪರಿಜೆಯ ಪದ್ಧತಿಯಂತೆ ವಿವಾಹವಾದ ಗಂಡು (ವರ) ಹೆಣ್ಣನ್ನು (ವಧುವನ್ನು) ತನ್ನ ಮನೆಗೆ ತಂದೆ ಆ ಸ್ಥಾನ ಕೇವಲ ಮೊದಲ ಮಡದಿಗೆ ಮಿಸಲಿರಿಸಿ. ಈಕೆಯೊಂದಿಗೆ ಸಂಸಾರ ಮಾಡಲುಬಹುದು ಅಥವಾ ಬಿಡಲೂಬಹುದು. ಹಾಗೂ ಆಕೆಗೆ ಜನಿಸಿದ ಮಕ್ಕಳನ್ನು ಪೋಷಣೆ ಮಾಡುವಂತಿಲ್ಲ ಆಕೆಯ ಆಸ್ತಿಯ ಮೇಲೆ ಹಕ್ಕು ಪಡೆದಿರಲಾರ.

ಮಕ್ಕಳು ಪಡೆಯುವುದಕ್ಕಾಗಿ ಜನಾಂಗದಲ್ಲಿ ಈ ರೀತಿಯ ಒಂದು ಪದ್ಧತಿಯಿದ್ದರೆ. ಈ ಜಾಗತೀಕರಣದ ಸಂದರ್ಭದಲ್ಲಿ ಈ ರೀತಿ ಇನ್ನೊಂದು ಹೆಣ್ಣಿನೊಂದಿಗೆ ಸಂಬಂಧ ಹೊಂದಿದ, ಯಾರೋ ಗುರುತು - ಪರಿಚಯವೇ ಇಲ್ಲದ ಹೆಣ್ಣಿನಿಂದ ತನ್ನ ವಂಶದ ಕುಡಿಯನ್ನು ಪಡೆಯಬಹುದಾಗಿದೆ. ಅಂದರೆ ಹಣಕೊಟ್ಟು ಮಗುವನ್ನು ಹುಟ್ಟಿಸಲು ಆಕೆಯ ಗರ್ಭವನ್ನು ಕೋಣಿ ಬಾಡಿಗೆ ಪಡೆಯುವಂತೆ

ಪಡೆಯುತ್ತಾರೆ. ಈ ವ್ಯವಸ್ಥೆಯಂತೆ ಆದರೆ ಜಾಗತೀಕರಣ ವಲ್ಲದ ಜನರು ಪದ್ಧತಿಯಂತೆ ಮಕ್ಕಳನ್ನು ಪಡೆದು ತಮ್ಮ ವಂಶಾಭಿವೃದ್ಧಿ ಮಾಡುತ್ತಿದ್ದರು. ಇದಕೆಲ್ಲಾ ಕಾರಣ ಮಕ್ಕಳ ಬಗೆಗಿರುವ ನಂಬಿಕೆ.

**ಪೈತಾಂಡೆ ಕಳಪೆ:**

ವಿವಾಹ ಎಂದಾಕ್ಷಣ ನಮ ಆಲೋಚನೆ ಒಂದು ಮಟ್ಟಕ್ಕೆ ತಲುಪುತ್ತದೆ. ಆದರೆ ನೀವು ಈ ಕೊಡವರ ವಿವಾಹ ಪದ್ಧತಿಯ ಪ್ರಕಾರಗಳನ್ನು ನೋಡಿದರೆ ಆಶ್ಚರ್ಯವೆನಿಸುತ್ತದೆ. ಇದಕ್ಕೆ ಕಾರಣ ಅಲ್ಲಿನ ಆಶಯಗಳು. ಈ ಒಂದು ಗುಂಪಿಗೆ ಸೇರುವ ಇನ್ನೊಂದು ವಿವಾಹ ಪ್ರಕಾರವೇ ಪೈತಾಂಡ್ ಕಳಪೆ ಇದು ಒಂದು ರೀತಿಯಲ್ಲಿ ಕೊದಿಮಂಗಲಕ್ಕೆ ಹೋಲುತ್ತದೆ. ಕೋದಿಮಂಗಲದಲ್ಲಿ ಹೇಗೆ ಮದುವೆಯಾಗಿ ಹೋಗುವುದಿಲ್ಲವೋ ಹಾಗೆ ಈಗಾಗಲೇ, ಮದುವೆಯಾಗಿರುವ ಹೆಣ್ಣಿಗೆ ನಡೆಯುವ ಮದುವೆ ಇದು ಅಷ್ಟೊಂದು ವೈಭವವಾಗಿ ನಡೆಯುವಂಥದ್ದೇನಲ್ಲ. ಇದರ ಹಿಂದಿನ ಉದ್ದೇಶ ಒಬ್ಬ ತಾಯಿಗೆ ಸಲ್ಲಬೇಕಾದ ಗೌರವ ಪೂಜೆ ಸನ್ಮಾನಗಳನ್ನು ಸಲ್ಲಿಸುವುದೇ ಆಗಿದೆ.

ಒಬ್ಬಳು ಕೊಡವತಿ ಹತ್ತು ಮಕ್ಕಳಿಗೆ ಜನ್ಮನೀಡಿ ಮಕ್ಕಳು ಹಾಗೂ ತಾಯಿ ಆರೋಗ್ಯಪೂರ್ಣವಾಗಿಯೇ ಉಳಿದರೆ. ಆ ತಾಯಿಗೆ ಗೌರವಯುತವಾಗಿ ವಿಶೇಷ ರೀತಿಯ ಉತ್ಸವ ನಡೆಸುವರು. ಇದು ಇಂದಿನ 'Wedding aniversary' ಯಂತೆ (Silver Zubli – Marriage) ಇದ್ದರು ಉದ್ದೇಶಗಳಲ್ಲಿ ಅಜಗಜಾಂತರ ವ್ಯತ್ಯಾಸವನ್ನು ಹೊಂದಿದೆ. ಇಂದಿನವು ಕೇವಲ ಸಂತೋಷ ಹಂಚಿಕೋಳ್ಳಲು ಅಷ್ಟೊಂದು ವೈಭವವಾಗಿ ನಡೆಯುವಂಥದ್ದೇನಲ್ಲ. ಇದರ ಹಿಂದಿನ ಉದ್ದೇಶ ಒಬ್ಬ ತಾಯಿಗೆ ಸಲ್ಲಬೇಕಾದ ಗೌರವ, ಪೂಜೆ, ಸನ್ಮಾನಗಳನ್ನು ಸಲ್ಲಿಸುವುದೇ ಆಗಿದೆ.

**6) ಕುಟ್ಟಪರಿಜೆ:–**

ಸಮಾಜದ ಮನ್ನಣೆಯಿಲ್ಲದಿರುವ ಗಂಡು – ಹೆಣ್ಣಿನ ಸಂಬಂಧ ಇದಾಗಿದೆ. ಇದಕ್ಕೆ ಜನಪದರಲ್ಲಿ ಅವಕಾಶವಿತ್ತು. ಕೆಲವೆಡೆಗಳಲ್ಲಿ ಇದು ಮರೆಯಲ್ಲಿ ಜರುಗಿದರೆ, ಇನ್ನು ಕೆಲವೆಡೆಗಳಲ್ಲಿ ಇದು ಎದುರಲ್ಲೆ ನಡೆಯುತ್ತದೆ. ಇದನ್ನು ವೇಶಾವಾಟಿಕೆ ಎಂದೇ ಕರೆಯುತ್ತಾರೆ. ಆದರೆ ಕುಟ್ಟಪರಿಜೆ ಅಷ್ಟು ಕೀಳಮಟ್ಟದಲ್ಲಿ. ಇಲ್ಲಿ ಗಂಡು – ಹೆಣ್ಣು ಕುಟುಂಬಸ್ಥರ ಮಾತು ಮೀರಿ ಅಥವಾ ವಿರುದ್ಧವಾಗಿ ಸಂಬಂಧ ಇಟ್ಟುಕೊಂಡು ಸಂಬಂಧದಿಂದ ಜನ್ಮ ಪಡೆದ ಮಕ್ಕಳು ತಂದೆ – ತಾಯಿ ಇಬ್ಬರ ಹೊಣೆಗಾರರಾಗಿರುತ್ತಾರೆ. ಅಲ್ಲಿ ತಾಯಿ – ತಂದೆಯರ ಮದುವೆಗೂ ಮುಂಚೆ ಜನ್ಮದಾತ

ತೀರಿಹೋದರು ಇವರ ಸಾಮಾಜಿಕ ಮೌನವೀಯ ಮೌಲ್ಯದಂತೆ ಮಕ್ಕಳಿಗೆ ತಂದೆ ಮನೆಯಲ್ಲಿ ಹಕ್ಕು ಕಲ್ಪಿಸುವುದಾಗಿದೆ.

**ಕೆಮಿಕುತ್ತಿ ಮಂಗಲ:**

ಕೊಡವರಲ್ಲಿ ಅತಿ ಅಪರೂಪವಾಗಿ ಕೆಲವೆಡೆ ಮಾತ್ರ ಕಾಣಸಿಗುವಂತಹ ಪದ್ಧತಿ ಇದಾಗಿದೆ. ಇದು ಕೂಡ ವಿವಾಹದ ಆಶಯ ಹೊಂದಿರದ ಸಾಮಾನ್ಯ ಸಮಾರಂಭವೇ ಆಗಿದೆ ಗಂಡಸರು ಚಿಕ್ಕ ವಯಸ್ಸಿನಲ್ಲೆ ಕವಿ ಚುಚ್ಚಿಸಿಕೊಳ್ಳುತ್ತಾರೆ. ಎಲ್ಲೆಡೆ ಹೆಂಗಸರು ಓಲೆ ಹಾಕಿಕೊಳ್ಳುವ ಉದ್ದೇಶದಿಂದ ಕಿವಿ ಚುಚ್ಚಿಸಿಕೊಂಡರೆ ಕೊಡವರಲ್ಲಿ ಈ ಕಿವಿಚುಚ್ಚಿಸಿರದ ಗಂಡಸರಿಗೆ ಹೆಣ್ಣು ಯಾರು ಕೊಡುವುದಿಲ್ಲ. ಅಲ್ಲದೆ ಮದುವೆಯಾಗದೆ ಸತ್ತ ಹೆಣಕ್ಕು ಕಿವಿಚುಚ್ಚಿ ಮದುವೆ ಮಾಡವರು.

ಅವರ ಕಿವಿ ಚುಚ್ಚುವ ಕಾರ್ಯ ವಿವಾಹ ಹಿನ್ನಲೆಯಲ್ಲಿಯೇ ನಡೆಯುವುದರಿಂದ ವಿವಾಹದ ಮಂಗಳ ಸಾಮಗ್ರಿಗಳೆಲ್ಲ ತಂದು. ಸಂಬಂಧಿಕರಿಗೆ, ಬಂಧು, ಬಾಂಧವ್ಯದವರಿಗೆ ಆಹ್ವಾನಿಸಿ ಸಂಭ್ರಮದಿಂದ, ವೈಭವಯುತವಾಗಿ ನೆರವೇರಿಸುವರು. ಭಾರತೀಯ ಸಂಸ್ಕೃತಿಯಲ್ಲಿ ಬಹು ಹಿಂದಿನಿಂದಲೂ ಮದುವೆ ಒಂದು ಸಂಪ್ರದಾಯವಾಗಿ ಬೆಳೆದು ಬಂದಿದೆ. ಪ್ರತಿ ವ್ಯಕ್ತಿ ಜೀವನದಲ್ಲಿ ಜೀವನವಶ್ಯಕ ವಸ್ತುಗಳಾದ ಅನ್ನ, ಬಟ್ಟೆ, ವಸತಿಯಂತೆ ಬಾಳಸಂಗಾತಿಯ (ಗಂಡ/ಹೆಂಡತಿ) ಅಗತ್ಯತೆಯಿದೆ ಎಂಬ ನಂಬಿಕೆಯಿಂದ ಅವರ ಸಂಗಾತಿ ಪಡೆಯುವ ಹಕ್ಕು ರೂಢಿಸಿಕೊಂಡು ಬಂದಿದ್ದಾರೆ. ಮನುಷ್ಯ ತನ್ನ ಲೈಂಗಿಕ ಬಯಕೆಯ ಈಡೇರಿಕೆಗಾಗಿ ಪ್ರಾಣಿಗಳ ರೀತಿಯನ್ನು ಅನುಸರಿಸದೇ ಇತರ ಪ್ರಾಣಿಗಳಿಗಿಂತ ವಿಭಿನ್ನವೆಂದು ಸಮಾಜದಲ್ಲಿ ಗುರುತಿಸಿಕೊಂಡಂತೆ ಈ ವಿಷಯದಲ್ಲೂ ವಿಭಿನ್ನ ಪದ್ಧತಿಯೊಂದನ್ನು ಬೆಳೆಸಿಕೊಂಡ ಅದೇ ವಿವಾಹ ಪದ್ಧತಿ ಧರ್ಮದ ಒಂದು ಕಟ್ಟಳೆಯಲ್ಲಿ ಆತ ಸುಖವನ್ನು ಅನುಭವಿಸಬಹುದು. ಸಮಾಜದ ಗೌರವಕ್ಕೂ ಪಾತ್ರನಾಗುತ್ತಾನೆ.

ಈ ವಿವಾಹಗಳು ಒಂದೇ ಆಶಯ ಒಂದೇ ರೀತಿಯಾದ ಸಂಪ್ರದಾಯಗಳು ರೂಢಿಸಿಕೊಂಡರು. ಆಯಾ ಪ್ರದೇಶದ ಆಯಾ ಕಾಲಘಟ್ಟದ ಜನರಲ್ಲಿ ವಿಭಿನ್ನ ರೀತಿಯಲ್ಲಿ ಆಚರಿಸಿಕೊಂಡು ಬರುತ್ತಾರೆ. ಇದೇ ರೀತಿ ಕೊಡವರಲ್ಲೂ ತನ್ನದೇ ಆದ ರೀತಿಯನ್ನು ಒಳಗೊಂಡದ್ದು 'ಕನ್ನಿಮಂಗಲ' ವಿವಾಹ ಪದ್ಧತಿ ಆದರೆ ಅವರಲ್ಲಿ ನಡೆಯುವ ನರಿಮಂಗಲ ಕೆಮಿಕುತ್ತಿ, ಪೈತಾಂಡೆ ಕಳಪೆ, ಕೊದಿಮಂಗಲ, ಕುಟ್ಟಪರಿಜೆ ಇತ್ಯಾದಿ ಪ್ರಕಾರದ ವಿವಾಹದ ಆಶಯ ಆಚರಿಸುವ ರೀತಿ ಎಲ್ಲವೂ ವಿಭಿನ್ನವೂ, ವಿಚಿತ್ರವೂ ಆಗಿದೆ ಅಲ್ಲದೆ ಇವುಗಳನ್ನು ಕೊಡವರಲ್ಲದೆ ಇನ್ನುಳಿದ ಜನಾಂಗದಲ್ಲಿ ಕಾಣಲಾರೆವು ಇದಕ್ಕೆ ಕಾರಣ ಕೊಡವರು ಪಾಶ್ಚಾತ್ಯ ಪ್ರಭಾವ ಪಡೆದವರು, ಕಾಡಿನಲ್ಲಿ

ಬದುಕುವ ಒಂದು ರೀತಿಯ ಬುಡಕಟ್ಟು ಜನಾಂಗದವರೇ ಆಗಿದ್ದು. ಸಾಹಸಿ, ವೀರರೂ ಆಗಿರುವುದೇ ಆಗಿರಬಹುದು. ಯಾವುದೇ ಒಂದು ಸಂಪ್ರದಾಯ ಆಚರಣೆ ಯಾರದೋ ಒಬ್ಬರಿಂದ ಯಾವುದೇ ಕಾರಣಕ್ಕಾಗಿ ನಡೆದು ಅದು ಸಮಾಜದಲ್ಲಿ ವಂಶಪಾರಂಪರ್ಯವಾಗಿ ಬೆಳೆಯುತ್ತದೆ. ಮುಂದಿನವರು ಅವುಗಳ ಬಗೆಗೆ ಹೆಚ್ಚಿನ ಆಲೋಚನೆ ಮಾಡದೆ "ಅಪ್ಪ ಹಾಕಿದ ಅಲದ ಮರ ಅಂತ ಜೋತು ಬೀಳುವವರೇ ಹೆಚ್ಚು" ಅದಕ್ಕೆ ಇಂದು ನಾವು ಹಲವು ಜನಾಂಗಗಳಲ್ಲಿ ಕಾಣುವ ಬೇರೆ ಬೇರೆ ಪದ್ಧತಿ. ಆಚರಣೆಗಳು ಒಂದು ಮೂಲ ಉದ್ದೇಶವಿಲ್ಲದೆ. ಅರ್ಥವಿಲ್ಲದೆ ಜರುಗುತ್ತವೆ. ಆದರೆ ಇಂದಿನ ಸಂದರ್ಭದಲ್ಲಿ ಸಮಯದ ಅಭಾವದಿಂದ, ಜಾಗತೀಕರಣದ ಪ್ರಭಾವದಿಂದ ಮಾಯವಾಗುತ್ತಿವೆ. ಅದರಂತೆ ಕೊಡವರಲ್ಲಿನ ಹಲವು ವಿವಾಹ ಪ್ರಕಾರಗಳಿಂದು ನಿಂತು ಹೋಗಿವೆ.

# ಅಧ್ಯಾಯ–೪.

## ಸೃಜನಶೀಲ ಬರಹಗಾರರಾಗಿ

ಎ) ಅರಳವ್ವ – ಕಾದಂಬರಿ – ಮಹಾನ್ವೇಷಣೆ

ಬ) ಬಾಡಿಗೆ ದೇವರು – ಕಥಾಸಂಕಲನ

ಸಿ) ಮುದ್ರಣ ಹಂತದಲ್ಲಿ –

- ಸಮಾಧಿ – ಕಾದಂಬರಿ
- ಅಂಬಲಿ – ಜೀವನ ಚರಿತ್ರೆ
- ಹಲಕಟ್ಟ ಸಿದ್ಧನ ಅವಾಂತರಗಳು

# ಅಧ್ಯಾಯ –4

## ಸೃಜನಶೀಲ ಬರಹಗಾರರಾಗಿ ಡಾ. ಹೆಬ್ಬಾಳೆ

ಕವಿ ಒಬ್ಬ ಕಲಾಕಾರ, ಆತ ತನ್ನ ಅನುಭವಗಳನ್ನು, ಭಾವನೆಗಳನ್ನಿಲ್ಲಿ ನಿರೂಪಿಸುತ್ತಾನೆ. ಅಂತಹ ಕಲೆಯೂ ಸೃಜನಶೀಲುವಾದಂತಹ ಕಾಯಕವಾಗಿದೆ. ಆ ಕಾಯಕಕ್ಕೆ ಮೂಲವಾಗಿ ಬೇಕಾಗಿರುವುದು ಪ್ರತಿಭೆ.

ಪ್ರತಿಭೆ ಬೇರೆ ಬೇರೆ ವ್ಯಕ್ತಿಗಳಲ್ಲಿ ಬೇರೆ ಬೇರೆಯಾದ ವಿಷಯಗಳಲ್ಲಿ ಅಡಗಿರುತ್ತದೆ. ಅದಕ್ಕಾಗಿ ಯಾರೋ ಚಿತ್ರಕಾರರಾದರೆ ಮೊತ್ತೊಬ್ಬರು, ಶಿಲ್ಪಕಾರರಾಗಿರುತ್ತಾರೆ. ಮೊಗದೊಬ್ಬರು ಸಾಹಿತ್ಯಕಾರರಾಗಿರುತ್ತಾರೆ. ಹೀಗೆ ವಿಭಿನ್ನವಾದ ಕ್ಷೇತ್ರಗಳಲ್ಲಿ ಗುರುತಿಸಿಕೊಳ್ಳುವವರಿಗೆ ಒಂದೊಂದು ಬಗೆಯದಾದ ಸೃಜನಶೀಲಗುಣವಿರುತ್ತದೆ. ಸೌಲಭ್ಯಗಳಿರುತ್ತವೆ. ಮಿತಿಗಳೂ ಇರುತ್ತವೆ. ಇವೆಲ್ಲವುಗಳನ್ನು ಆತ ಅರಿತುಕೊಂಡು ಹೆಜ್ಜೆಗಳನ್ನಿಡಬೇಕಾಗುತ್ತದೆ.

ಸೃಜನಶೀಲ ಸಾಹಿತ್ಯ ರಚನೆಯಲ್ಲಿ ತಮ್ಮ ವ್ಯಕ್ತಿತ್ವವನ್ನು ಗುರುತಿಸಿಕೊಂಡಿರುವ ಡಾ. ಹೆಬ್ಬಾಲೆಯವರು ತಮ್ಮ ಕಲಾ ಮಾಧ್ಯಮದ ಸಾಧ್ಯತೆಗಳನ್ನು ಗುರುತಿಸಿಕೊಂಡು. ಆ ಒಂದು ವಿಷಯದಲ್ಲಿ ಎಷ್ಟೆಲ್ಲಾ ಕಾರ್ಯ ನಡೆದಿದೆ. ಅದರ ಪರಂಪರೆಯ ದಾರಿಯನ್ನು ನೋಡಿ ಅದರಿಂದ ಸಮಾಜಕ್ಕೆ ದಕ್ಕಿದ ಪರಿಣಾಮಗಳನ್ನು ಅರಿತು, ವಸ್ತು, ತಂತ್ರಗಳ ದೃಷ್ಟಿಯಲ್ಲಿ ಅದರ ಸ್ವರೂಪ – ಸ್ವಭಾವಗಳೇನು ಎಂಬುದನ್ನು ಅದರ ವಿವಿಧ ಮಗ್ಗಲುಗಳ ನೆಲೆಯಲ್ಲಿ ಅಭ್ಯಸಿ, ಆ ಮಾರ್ಗದಲ್ಲಿ ತನ್ನಿಂದ ಸಹೃದನಿಗೆ / ಸಮಾಜಕ್ಕೆ ಇನ್ನು ಯಾವ ರೀತಿಯಾದ ಕೊಡುಗೆಯನ್ನು. ಸಂದೇಶವನ್ನು ಕೊಡಲಿಕ್ಕೆ ಸಾಧ್ಯವಾಗುವುದೆಂದು ಸದಾ ಯೋಚಿಸುತ್ತಿರುತ್ತಾರೆ. ಅವರ ಈ ಒಂದು ಗುಣಕ್ಕೆ ಸಾಕ್ಷಿಯಾಗಿ ಅವರು ರಚಿಸಿರುವ 'ಸಮಾಧಿ' ಕಾದಂಬರಿಯನ್ನು ಇತರೆ ಕೃತಿಗಳನ್ನು ಓದುವ ಹವ್ಯಾಸ ರೂಢಿಸಿಕೊಂಡ ಇವರು. ಅವರ (ಕುವೆಂಪು) 'ವಿಶ್ವಮಾನವನಾಗು' ಸಂದೇಶವನ್ನು ಯೋಚಿಸಿ ಮನುಷ್ಯ ತನ್ನ ಸುತ್ತ ತಾನೇ ವರ್ಗ, ವರ್ಣ, ಕುಲ, ನೆಲೆ ಎಂಬೆಲ್ಲ ಬೇಲಿಗಳು ಹಾಕಿಕೊಂಡು ಹೇಗೆ ಅಂದರೆ ವಿಶ್ವಮಾನವನಾಗಿ ಹುಟ್ಟಿದ ಮನುಷ್ಯ ಅಲ್ಪಮಾನವನಾಗುತ್ತಾ ಬದುಕಿ ಮತ್ತೆ ಸತ್ತ ಮೇಲೆ ಮತ್ತೇ ವಿಶ್ವಮಾನವನ್ನಾಗುತ್ತಾನೆಂದು ಹೇಳುವುದರ ಮುಖಾಂತರ ಮನುಷ್ಯರಲ್ಲಿನ ತಾರತಮ್ಯ ಭಾವನೆಯನ್ನು ಸಹರದಯರ ಮುಂದೆ ಬಿಚ್ಚಿಡುತ್ತಾರೆ.

ಇದರಿಂದ ಅವರು ಜನಪ್ರಿಯತೆಯ ಸುಳಿಗೆ ಸಿಕ್ಕದೆ, ಸಾಹಿತ್ಯ ಕ್ಷೇತ್ರದಲ್ಲಿ ಅಪ್ರಿಯರಾಗುವ, ವಾದಗ್ರಸ್ತರಾಗುವ ರಿಸ್ಕ್ ತೆಗೆದುಕೊಂಡು ಸಮಾಜದ ನಿಜ ಸ್ಥಿತಿಯನ್ನು ಹೇಳುವ ಹೊಸ ದಾರಿಗಳನ್ನು ಕಂಡುಕೊಂಡಿದ್ದಾರೆ. ಈಗಾಗಲೇ ಜನರ ಮನಸ್ಸಿಗೆ ಒಗ್ಗಿರುವ ಪದ್ಧತಿಯನ್ನೇ ಆಶ್ರಯಿಸಿ ಅಭಿವ್ಯಕ್ತಿಸುವ ಸರಳವಾದ ಮಾರ್ಗವನ್ನು ಬಿಟ್ಟು

“ಅಪ್ಪ ಹಾಕಿದ ಆಲದ ಮರ’ ಅಂತ ಅದಕ್ಕೆ ಜೋತು ಬೀಳದೇ ತಮ್ಮ ಮನಸ್ಸಿನ ಅಭಿವ್ಯಕ್ತಿ ಪ್ರಯೋಗಾತ್ಮಕತೆ ಪರಂಪರೆಯನ್ನು ಸಾಧನವಾಗಿ ಬಳಸಿದ್ದಾರೆ. ಇಂತಹವರಿಂದಲೇ ಸಾಹಿತ್ಯದಲ್ಲಿ ಕೃಷಿಯಾಗಿ ಹೊಸಗನ್ನಡ ಸಾಹಿತ್ಯ ಹುಟ್ಟಿ ವಿಸ್ತೃತವಾಗಿ ಬೆಳೆದು ನಿಂತಿರುವುದು ಇನ್ನು ಮುಂದೆ ಬೆಳೆಯಬೇಕಾಗಿರುವುದು.

ಇವರಲ್ಲಿ ಇರುವ ಮುಕ್ತವಾದ ಸೃಜನಸ್ವಾತಂತ್ರ್ಯ ಸಂಪ್ರದಾಯ ಬದ್ಧವಾದ, ನೆಲೆಯಲ್ಲಿ ಬದುಕಿ ಬಾಳಿದ ‘ಅರಳವ್ವ’ನ (ಕಾದಂಬರಿ) ಬದುಕಿನ ಚರಿತ್ರೆಯನ್ನು ವರ್ತಮಾನದಲ್ಲಿ ವ್ಯವಹರಿಸುತ್ತಾ ಸುತ್ತಣ ಸಮಾಜಕ್ಕೆ ಇಡಿಯಾಗಿ ಪ್ರತಿಸ್ಪಂದಿಸುತ್ತಾ ತಾನು ಹೇಳಬೇಕಾಗಿರುವುದನ್ನು ಆಧುನಿಕ ಸನ್ನಿವೇಶಕ್ಕೆ ಹೊಂದಿಕೆಯಾಗುವಂತೆ ರಚಿಸಿದ್ದಾರೆ. ಅರಳವ್ವನ ಜೀವನ ಬರೆಯುವಾಗ ಕವಿ ತಮ್ಮ ಸುತ್ತಲೂ ದಲಿತರು, ಅನಕ್ಷರಸ್ಥರು, ಬಡವರು ಸಮಾಜದಲ್ಲಿ ಯಾವ ರೀತಿ ಬದುಕುತ್ತಿದ್ದಾರೆ, ಎನ್ನುವುದನ್ನು ನೋಡಿ, ಕಲ್ಪಿಸಿಕೊಂಡು, ಸಮಾಜದಲ್ಲಿ ತಾವು ಪಡೆದ ಅನುಭವಗಳನ್ನು ಜೊತೆಗೆ, ವಚನಕಾರರ, ತತ್ವಪದಕಾರರ, ಕೀರ್ತನಕಾರರ ರಚನೆಗಳನ್ನು ಓದಿ ಅದರಿಂದ ತಮ್ಮ ಮನಸ್ಸಿನ ಮೇಲಾದ ಪ್ರಭಾವಗಳನ್ನು ಒಟ್ಟಿಗೆ ಸೇರಿಸಿ ಪಾಕವಾಗಿಸಿಕೊಂಡು ಅದನ್ನು ಬರವಣಿಗೆಯಲ್ಲಿ ಬೆರೆಸಿದ್ದಾರೆ. ಈ ಅನುಭವ, ಕಲ್ಪನೆಗಳ ಪಾಕದಿಂದ ಮಾತ್ರವೇ ಲೇಖನಿಯಾಗಿಲ್ಲ. ಆ ಅಭಿವ್ಯಕ್ತಿಯಾಗುವಲ್ಲಿ ಸಾಮಾನ್ಯ ವಿವರಣೆಗೆ ಮೀರಿದ ಒಂದು ಸ್ವರೂಪ, ಒಂದು ನಾಜೂಕು & ಶೈಲಿ, ಅದರಲ್ಲಿ ಮಿಳಿತಗೊಂಡಿದೆ. ಇದೆಲ್ಲ ಅವರ ಮಲೆನಾಡಿನ ಅದರಲ್ಲೂ ಹೆಬ್ಬಾಲೆಯವರ ಗ್ರಾಮದ ಪ್ರಾದೇಶಿಕ ಭಾಷೆಯಲ್ಲಿ ಸಂವಹನದ ರೂಪ ಪಡೆದಿದೆ.

ಹೀಗೆ ಒಬ್ಬ ಸೃಜನಶೀಲ ಸಾಹಿತಿಯಲ್ಲಿರಬೇಕಾದ ಲಕ್ಷಣಗಳು, ಪ್ರಯೋಗಶೀಲ ದೃಷ್ಟಿ ಧೋರಣೆಯೆಲ್ಲವು ನಾಗೇಶರವರಲ್ಲಿದೆ, ಅದು ಅವರ ಬರವಣಿಗೆಗಳಾದ ಅರಳವ್ವ (ಕಾದಂಬರಿ), ಬಾಡಿಗೆ ದೇವರು (ಕಥಾಸಂಕಲನ), ಹಲಕಟ್ಟ ಸಿದ್ಧನ ಅವಾಂತರಗಳು ( ಕೃತಿ), ಅಂಬಲಿ (ಜೀವನ ಚರಿತ್ರೆ) ಮತ್ತು ಸಮಾಧಿ (ಕಾದಂಬರಿ), ಇವುಗಳಲ್ಲಿ ಕಾಣಬಹುದಾಗಿದೆ.

## ಎ) ಅರಳವ್ವ ಕಾದಂಬರಿಯ ಮಹಾನ್ವೇಷಣೆ

ಡಾ॥ ನಾಗೇಶ ಹೆಬ್ಬಾಲೆಯವರು ಕಾದಂಬರಿ ಲೋಕದಲ್ಲಿ ಕೃಷಿ ಮಾಡಿದ ಮೊಟ್ಟಮೊದಲ ಹೆಜ್ಜೆಯೆಂದರೆ 'ಅರಳವ್ವ' ಇದು ಕುತೂಹಲಕಾರಿಯಾದ ಕಥೆಯನ್ನು ಒಳಗೊಂಡಿರುವ ಮಹತ್ವದ ಕಾದಂಬರಿಯಾಗಿದೆ. ಈ ಕಾದಂಬರಿಯು ಪ್ರಾದೇಶಿಕ ಭಾಷೆ, ಶೈಲಿ, ಕಥಾ ಆವರಣದಲ್ಲಿ ಪ್ರಾದೇಶಿಕ ವ್ಯಕ್ತಿಗಳು, ವರ್ಣ, ವರ್ಗ, ವ್ಯವಸ್ಥೆ ಈ ಆಧಾರದ ಮೇಲಿನ ಕುಲಕಸುಬುಗಳು, ಸಾಂಸ್ಕೃತಿಕ ಆಚಾರ-ವಿಚಾರಗಳು ಜನಪದರ ಆಸೆ, ಆಸಕ್ತಿ ಸಾಮಾಜಿಕ ಸಂಬಂಧಗಳು ನೀತಿ-ನಿಯಮಗಳು ಹೀಗೆ ಸಮಾಜದ ಬದುಕನ್ನು ದೇಶಿ ಸೊಗಡಿನಿಂದ ತುಂಬಾ ಸೊಗಸಾಗಿ ಮೂಡಿಬಂದಿರುವುದರಿಂದ ಕನ್ನಡ ಕಾದಂಬರಿ ಸಾಹಿತ್ಯದಲ್ಲಿ ತನ್ನದೇ ಆದ ಅನನ್ಯತೆಯಿಂದ ಕೂಡಿದೇ. ಅರಳಿಯ ಜೀವನವನ್ನು ಆಧಾರಿಸಿರುವ ಕಾದಂಬರಿ ಆಕೆಯ ಜೀವನದಲ್ಲಿ ಎದುರಾಗುವ ಸಮಸ್ಯೆಗಳನ್ನು ಪ್ರತಿಭಟಿಸದೇ ಛಲದಿಂದ ಎಲ್ಲವನ್ನ ಸಹಿಸಿಕೊಂಡು ಬದುಕನ್ನು ಮುಂದುವರಿಸುವ ಕನ್ನಡಿಯಾಗಿದೆ.

ದಲಿತರ ಹಸಿವು, ಬಡತನ, ಕಸುಬು, ಅನಕ್ಷರತೆ, ದ್ವೇಷ ಮನೋಭಾವ, ಇಡೀ ಹೆಬ್ಬಾಲೆ ಗ್ರಾಮದ ದಲಿತರ ಜೀವನ ಇಲ್ಲಿ ಕೇಂದ್ರಿಕೃತವಾಗಿದೆ. ಆದ್ದರಿಂದ ಕಥಾ ಆಶಯ, ಭಾಷೆ ಶೈಲಿ ಪಾತ್ರಗಳ ಮನೋವಿಶ್ಲೇಷಣೆಯ ಉದ್ದೇಶದಿಂದಾಗಿ ಈ ನನ್ನ ಬರವಣಿಗೆ ಮುಂದುವರಿದಿದೆ.

**ಕಾದಂಬರಿಯ ಆಶಯ :-** ಅರಳವ್ವನಂತಹ ಒಂದು ವಿಶಿಷ್ಟ ಕಥಾನಾತ್ಮಕ ಕಾದಂಬರಿ ಮೂಲಕ ಅಪರಿಚಿತ ದಲಿತ ಸಮುದಾಯಗಳ ಸಾಂಸ್ಕೃತಿಕ ಅನ್ಯೋನ್ಯತೆಯನ್ನು ತೋರಿಸಿದ್ದಾರೆ.

**ಡಿ.ಈರೇಶ ನಗರ್ಲೆಯವರು :-** ಅಗಸ್ಟ 20 2006ರ ಭುವನ ಸಂಗಾತಿ ಮಾಸ ಪತ್ರಿಕೆಯಲ್ಲಿ ಅರಳವ್ವನಿಂದ ಅರಳಿದ ಪ್ರತಿಭೆ ಡಾ॥ ಹೆಬ್ಬಾಲೆ ಕೆ. ನಾಗೇಶ ಎಂಬ ತಮ್ಮ ಬರವಣಿಗೆಯಲ್ಲಿ "ದಲಿತ ಸಾಹಿತ್ಯವೆಂದರೆ ದೇವನೂರು ಮಹಾದೇವ ಹಾಗೂ ಸಿದ್ದಲಿಂಗಯಾನೇ ಎಂಬ ಮಾತನ್ನು ಡಾ॥ ನಾಗೇಶ ಹೆಬ್ಬಾಲೆಯಂತಹ ಯುವ ಲೇಖಕರು ಮುಂದಿನ ದಿನಗಳಲ್ಲಿ ಸುಳ್ಳಾಗಿಸುವ ಭರವಸೆಯ ಹಾದಿಯಲ್ಲಿ ಸಾಗಿದ್ದಾರೆಂದು ಹೇಳಿದ್ದಾರೆ.

**ಸಂದರ್ಶನದಲ್ಲಿ ಕವಿಗಳು ಹೇಳಿಕೊಂಡಂತೆ :-** ವಿಶ್ವದ ವ್ಯವಸ್ಥೆ ಸ್ಫೋಟದ ಚಿಂತೆಯಲ್ಲಿ ನನ್ನ ಜನರ ಹಸಿ ಕುಡಿಯ ಕದಿರಿನ ಮನಸ್ಸುಗಳ ನುಚ್ಚು ನೂರಾದಾಗ ಅವರ ಅಂತರಂಗದೊಳಗೆ ತುಡಿತ ಮಿಡಿತಗಳು ಹುದುಗಿಕೊಂಡಿರುತ್ತದೆ. ಆಗ ಕಾರ್ಗತ್ತಲೆ ಕವಿಯುತ್ತದೆ ಮಾತು ನಿಂತು ನಿಶ್ಯಬ್ಧ ಅವರಿಸಿ ಉಸಿರುಗಟ್ಟುತ್ತದೆ. ಈ ಜಂಕ್ಚರ್‌ನಲ್ಲಿ ಆಶಯ, ಹಮಬಲ, ಆತುಕ ನೋವು ಭೀಭತ್ಸತೆ, ತಕರಾರುಗಳು ನನ್ನನ್ನು ಬಡಿದ್ದು

ಎಚ್ಚರಿಸುತ್ತಿದ್ದವು. ಆಗ್ಗಿಂದಾಗ್ಗೆ ಅಲ್ಲದೆ ಹಸಿ ಹಸಿ ಕುಸುಮಗಳು ಹೇಳಿದ್ದು ಸ್ಮೃತಿಪಟಲದಲ್ಲಿ 'ಸರಿದು, ಜರಿದು ಹಿಗ್ಗಾಡುತ್ತಿದ್ದವು, ಒಟ್ಟಿನಲ್ಲಿ ದಲಿತ ಇತಿಹಾಸದ ಪರಂಪರೆಯ ತೆಕ್ಕೆಗೆ ಒಳಗೆ ಒಡಮೂಡಿದ ನೋವು, ದುಃಖ, ಹಿಂಸೆ, ಕೌರ್ಯ, ಹಸಿವು, ಬಡತನ, ದಾರಿದ್ರ್ಯ, ದಾಹ ಇವೆಲ್ಲವುಗಳ ಜೊತೆ ಮುಖಾಮುಖಿಯಾಗಿರುವ ನನ್ನ ಆಲೋಚನೆಗಳೇ "ಅರಳವ್ವ" ಎಂಬ ಅಕ್ಷರ ರೂಪದ ಕಥನಕ್ಕೆ ಸ್ಫೂರ್ತಿ" ಎಂದಿದ್ದಾರೆ.

ದಲಿತರ ನಿತ್ಯ ಜೀವನವನ್ನು ಅರಳಿಯ ಜೀವನದ ಮುಖಾಂತರ ಬಿತ್ತರಿಸುವುದನ್ನ ಆಯಾ ಪಾತ್ರಗಳ ಸಂಭಾಷಣೆಯಿಂದ ಕಾಣಬಹುದು. ತಮ್ಮ ಜೀವನದಲ್ಲಿ ಯಾವುದೇ ನಿಶ್ಚಿತ ಗುರಿ ಕಾಣದೇ ಕೆಳವರ್ಗದವರು ಮೇಲ್ ವರ್ಗದವರ ಮನೆಯಲ್ಲಿ ಒಂದು ಹೊತ್ತಿನ ಊಟಕ್ಕಾಗಿ (ಕೂಳಿಗಾಗಿ) ದುಡಿಯುವ ದೃಶ್ಯ ವ್ಯವಸ್ಥೆಯ ಸಮಾಜದಲ್ಲಿ ಸಾಮಾನ್ಯವಾಗಿದೆ.

**ಸಿಂಗ್ರಿ** :- ಊರಾಳಲ್ಲಿರೋ ಅಟ್ಟಿಗೆವಾಗಿ ಗೌಡ್ರುಮನೆ ಯಾಲಬಾಚಿ ವಲ ಮನೇಲಿ ಕೂಲಿಕಂಬಳ ಮಾಡಿ ಬ್ಯಾವ್ರ ಸುರಿಸಿ, ರಕ್ತ ಬಸಿದು ನನ್ನ ಸೈಕಾಲ್ಯ ನರಗಳುಇಂಡಿ ಇಷ್ಟೆಕಾಯಿ ಆಗ್ಯಾವೆ.

**ಕುಡುಕರು** :- ಅಲ್ಲಾ ನಮ್ಮ ಕಂಡೇಟಿಗೆ ಯೇನಾಯ್ತದೆ ನಿಮ್ಗೆ ನಾವು ಅವ್ರ ಇವ್ರ ಮನೇಲಿ ಕೂಲಿಗೀಲಿ ಕಸಗಿಸ ಬಾಚ್‌ತಿವಿ ನಿಜ ಆದ್ರೆ ಮರ್ವಾದೆ ಬುಟ್ಟಿಲ್ಲಾ ಬುದ್ಧಿ.

ಎಂದು ಮೇಲ್‌ವರ್ಗದವರ ಮನೇಲಿ ಅಸಹ್ಯ ಪಟ್ಟುಕೊಳ್ಳದೇ ಎಲ್ಲಾ ಕೆಲಸಗಳನ್ನ ಮಾಡುವ ಇವರು (ದಲಿತರು) ಅವರಿಗೆ ಗೌರವವನ್ನು ನೀಡಬೇಕೆಂಬುದು ಕಟ್ಟುನಿಟ್ಟಾಗಿ ಬೆಳೆದುಕೊಂಡು ಬಂದ ನಿಯಮವೇ ಆಗಿತ್ತು.

ಇವ್ರ ಅಪ್ಪ ಅವ್ವ . . . . . ಗೌಡ್ರು, ಪಟೇಲರು, ಅಯ್ಯಾನೋರು, ಮನೇಲಿ ಕಸ ಬಳಿಯೋದು, ಏಲ ಬಾಚಿ, ರಾಗಿ ಬೀಸಿ, ಬತ್ತ ಕುಟ್ಟಿ, ಉಳಿಕೆ, ಪಳಿಕೆ ದುಡ್ಡುಕಾಸಲಿ ಅಸಿಟ್ಟು ಪಸಿಟ್ಟು ತಂದ್ದಿದ್ರೆ ಯಾನ್ ಕಡ್ಡಹಾಕ್ ಬಂದೊರಂಗೆ ಮನ್ಯೋರ್ನ ಎದ್ರಿಸಿಕೊಂಡು ಅಚ್ಚಕಟ್ಟಾಗಿ ಬಿಕ್ಕಿನಬಿರಿಯಗಾಜ ತಿಂದ, ಬುಡೋದು ಹಗಲೆಲ್ಲಾ ಇಂಗೆ ಆಡೋದು, ನಮ್ಗೆ ಮರ್ವಾದೆ ಕೊಡೋದು ಬ್ಯಾಡ್ವಪ್ಪ ಅತ್ಲಗಿ, ನಮ್ಮ ಕಷ್ಟಸುಕ್ದಲಿ ನಮ್ಮಳೀಗೆ ಸೇಕ್ ಗೀಕ್, ಬಾಲಗರವೋ, ಪೂಜೆಗೀಜೆಲಿ ಯಂತ್ರ ಗಿಂತ್ರವಾ ಮಂತ್ರಿಸಿ ಕೊಡ್ತರೆ, ಆ ಬ್ರಾಮಣ್ರು ಅಯ್ಯನೋರ, ಅಮ್ಯಾಕೆ ಕುಳ್ಳೆಗೌಡು, ಮೂಳೆ ಗೌಡ್ರು ಮನೆಗೆ ಓಗಿ ಇಳ್ಳಿಕೆ ಯಾನು ಇಲ್ಲಂದ್ರೆ ಅಸಿಟ್ಟೋ ಇಲ್ಲಾ ರಾಗಿನೋ ಇಲ್ಲಾ ಉಳಿಕೆ ಪಳಿಕೆ ತಂಗ್ಲ ಯಾನಾದ್ರೂವೆ ಉಳ್‌ದಿದ್ರೆ ಅದ್ನ ಇಸ್ಕೊಬತ್ತವೆ ಅಲ್ಲಾ ಅಂತಿನಿ ಅಂತೋರು ಮುಂದ್ಲೆಯ ಆ ಉಟ್ಟಿರೋ ಅರಕ್ಲು ಪಂಚೆನೆಯ ಮ್ಯಾಕೆತ್ತಿ ಅವು ಸರಿಸಮ್ಮೆ ಕುಂತ್ಕೊಂಡು ಮ್ಯಾಲುಕೀಳು ಮರ್ತು ಆ ಗಳಾಸಲೆಯ ಕಾಫಿ ಈರ್ತಿರೋದ್ಯಾನು, (ಅರಳವ್ವ ಪುಟ 51) ಸಿಂಗ್ರಿಯ ಈ ಮಾತಿನಲ್ಲಿ

ಮೇಲು-ಕೀಳು, ಮೂಢನಂಬಿಕೆ ಒರಟುತನ, ಮಧ್ಯಪಾನ ಸೇವನೆ ಇವೆಲ್ಲ ಆ ಸಮಾಜದಲ್ಲಿ ಎಷ್ಟರಮಟ್ಟಿಗೆ ಪ್ರಚಲಿತದಲಿ ಇದ್ದವು ಎಂಬುದನ್ನು ತಿಳಿಸುತ್ತವೆ.

ಹಸಿವಿನ ಹಾಹಾಕಾರ ದಲಿತರಲ್ಲಿ ಎಷ್ಟು ಕಾಡುತಿತ್ತು ಎನ್ನುವುದು ಅರಳವ್ವನ ಮಕ್ಕಳು ಮೊಮ್ಮಕ್ಕಳು ಬಡಿದಾಟುವುದರಿಂದ ಕಾಣಬಹುದು. ಅರಳವ್ವ ಸಂತೆಗೆ ಹೋಗಿ ಬರುವಾಗ ಏನಾದರೂ ತಿನ್ನಲು ತರಬಹುದೆಂದು ಕಾಯುತ್ತಿದ್ದರು ಅಕ್ಕ ಪಕ್ಕದ ಮನೆಯ ಜನರು ಅರಳವ್ವನ ಮನೆಗೆ ಬಾಡು (ಮೌಂಡ) ಬೇಡಲು ಬರುತ್ತಿದ್ದರು. ಮೇಲ್ ವರ್ಗದವರ ಮನೆಯಲ್ಲಿನ ತಿಂದು ಮಿಕ್ಕಿದ ತಂಗಳು ಅನ್ನವನ್ನ ತಿನ್ನುವುದು ಮಕ್ಕಳಿಗಾಗಿ ಗಂಜಿಯನ್ನ ಮಾಡಿ ತಾನು ನೀರು ಕುಡಿದು ಮಲಗುವುದು 'ಹುಟ್ಟಿದ ಶಿವಾ ಹುಲ್ಲು ಮೇಯಿಸ್ತಾನಾ ಎಂದು ಬಗೆಯಿವುದು' ಇವೆಲ್ಲ ಜನರ ಬಡತನ, ಹಸಿವಿನ ಹಾಹಾಕಾರವನ್ನ ಎತ್ತಿಹಿಡಿದು, ದಯನೀಯ ಸ್ಥಿತಿಯನ್ನು ತೋರುತ್ತವೆ. ಹಸಿವನ್ನ ತಾಳಲಾರದೆ ಸತ್ತ ದನಗಳ ಚರ್ಮವನ್ನು ಸುಲಿದು ಮಾರಿಕೊಂಡು ಅದರ ಮೌಂಸವನ್ನ ಒಣಗಿಸಿ, ಬೇಯಿಸಿ ತಿನ್ನುವುದ ರೂಢಿಸಿಕೊಂಡರು.

ಅರಳವ್ವ ಮಾಮೂಲಂಗೆ ಉರಳ್ಳೆ ಕಡ್ಗೆ ಕುಕ್ಕೆ ಒತ್ಕೊಂಡು, ವಂಟ್ಲು, ಅವಳು ತಕ್ಕೊಬಗೊ ಸೀಗಡಿ ಚಂದಗದೆ ಅಂಥ ಗೌಡ್ರ ಯಂಡ್ರು ಕರಿದಿ ಮಾಡಿದ್ರೆ ಇನ್ನೊಂದು ಮನೆಲಿ ಕರಿಮೀನ್ನ ಬಂದಾಣೆಂದ್ರೂ ತಕ್ಕೋಳೋರು, ಕೊಟು ಮ್ಯಾಗ ಅಲ್ಲಾ ಕನ್ರವಾ ಯಾನಾದ್ರೂ ಉಳಿಕೆ ಪಳಿಕೆ ಇದ್ರೆ ಕೊಡಕ್ಕಾಗದಾ? ಅಂತ ಬೇಳ್ದಾಗ ಇರು ಅರಳಿ ಬಂದೆ ಅಂತ ಬಳಿಕೆ ಓಗಿ ಅದಘ ಮುರುಕ ರೊಟ್ಟಿ, ಒರದೆಲ್ಡೂ ಚೂರು ಉಪ್ಪನಿಶಾಯ ಕೊಡೊರ, ಅದು ಅವಳಗಿ ಕೇಳಿದ್ರೆ ಇನ್ನೊಂದು ಅಟ್ಟಿಲಿಯಾನಾರ ತಕ್ಕೊಂಡ್ರೆ ಇಟ್ಟು ಕೊಟ್ಟು ಇಲ್ಲೆ ನುಂಗಕ್ಕಾಗದ ಅನ್ನೋರ, ಇಲ್ಲಕನ ತಾಯಿ ನನ್ನ ಅಕ್ಲು ವಾದ್ರೆ ನನ್ನ ಕೈಬಾಯಿನೆ ನ್ವಾಡ್ತಾವೆ ಯಾನಾರ ತಂದಿರ್ತಳೆ ನಮ್ಮವ್ವಾ ಅಂತ. . . . ಯಾನೋ ಅವು ತಿಂದ್ರೆ ನಂಗೂವೆ ವಸಿ ನಿಮಣಯ್ತದೆ (ಅರಳವ್ವ ಪು-83)

ಕುಲ್ವಾಡ್ಕೆ ಚಂದಗಿ ಮಾಡ್ಕೊವಾಗ್ಬೇಕು. ಇಲ್ಲದಿದ್ದರೆ ಇಂಗೆ ಸತ್ತಯಮ್ಮೆ, ದನ, ಕರ, ನನ್ನ ಪಾಲಿಗೆ ದಕ್ಕಕ್ಕೆ ಇಲ್ಲ ಬ್ಯಾರೋರ್ಗೆ ವಂಟೋಯ್ತದೆ ಅಮ್ಯಾಕ, ಬಾಡು ಬಳ್ಳಿಯಲ್ಲಿಂದ ತರ್ಲಿ, ವಟ್ಗೆ ಇಟ್ಟು, ಇಲ್ಲದೆಯ ಯಾಟೊ ಜೀವ್ಸ ಹಕ್ಲು ಬರಿ ಬಾಡು ಬಳ್ಳಿ ತಇಂದು ಮನಿಕೊಂಡವೆ ಅದ್ಕೆಯಾ ತಿಂದು ದುಡಿಯೋಂಗೆ ಆಗಿ ಕೈಗೆ ಬಂದವೆ. ಆ ಎಮ್ಮೆ ಕರ ಸತ್ತು ಅವ್ರ ಹಟ್ಟೆಲ್ಲವಾ ಸೂತಕ ಅಮರಿಕೊಂಡಿತ್ತು ಆದ್ರೆ ಅರಳ್ಳಿ ಗಂಡ ಮಕ್ಕಳಿಗೆ ಅದೇ ಸ್ವರ್ಗಲೋಕಕ್ಕೆ ಕರ್ಕೋವಾಗಿತ್ತು (ಅರಳವ್ವ ಪು : 87) ಮೇಲ್‌ವರ್ಗದವರ ಮನೆಯಲ್ಲಿ ಜೀತ ಮಾಡುವ, ಚಿಕ್ಕ ಪುಟ್ಟ ಕಾರ್ಯಕೈಗೊಳ್ಳುವ ಇವರಿಗೆ ಶ್ರೀಮಂತರ ಮನೆಯ ತಿಂಗಳಾನ್ನವೆ ಮೃಷ್ಟಾನ್ನವಾಗಿತ್ತು. ಅಲ್ಲದೆ ಹಸಿವು ತಾಳದೆ ಸತ್ತ ದನಕರುಗಳನ್ನು ತಿಂದು ಹೊಟ್ಟೆಯನ್ನು ಹೋರೆಯುತ್ತಿದ್ದರು ಎಂಬುದು ಗೋತ್ತಾಗುವುದು. ಜಾಗತೀಕರಣ ಹೆಬ್ಬಾಲೆಯ ಊರಿಗೂ ಕಾಲಿಟ್ಟು ಅಲ್ಲಿನ ಜನರನ್ನು

ಶಿಕ್ಷಿತರನ್ನಾಗಿ (ಕೆಳವರ್ಗದ ಜನರನ್ನು ಶಿಕ್ಷಿತರನ್ನಾಗಿ) ಪರಿವರ್ತಿಸಿತ್ತು ಎಂಬುದು ಅರಳೀಯ ಅಳೀಯ ಕೆಂಚ ಒಂದೆರಡನೆ ಕ್ಲಾಸು ಓದಿದ್ದ ಆ ಹೊತ್ತಿಗಾಗಲೇ ಹೆಬ್ಬಾಲೆಗೆ ಟಾರ್ ರೋಡುಗಳು ಬರುತ್ತಿದ್ದವು.

ಭಾಷೆ ಮತ್ತು ಶೈಲಿ :- ಸೃಜನಶೀಲ ಬರಹಗಾರರಾಗಿ ಗುರುತಿಸಿಕೊಂಡ ಡಾ॥ ನಾಗೇಶರವರು ಅರಳವ್ವ ಕಾದಂಬರಿಯಲ್ಲಿ ಗ್ರಾಮ್ಯ ಭಾಷೆಯನ್ನ ಅದರಲ್ಲೂ ಪ್ರಾದೇಶಿಕ (ಕೇರಿಯ) ಭಾಷೆಯನ್ನು ಅಳವಡಿಸಿಕೊಂಡಿದ್ದಾರೆ. ಅದನ್ನು ಅರಳವ್ವನ ಅಥವಾ ದಲಿತರ ಭಾವನೆಗಳನ್ನ ವ್ಯಕ್ತಪಡಿಸಲು ಈ ಪ್ರಾದೇಶಿಕ ಭಾಷೆ ಬಹಳ ಸಹಯಾಕವಾಗಿದೆ, ಹೆಬ್ಬಾಲೆಯವರು ಹೆಬ್ಬಾಲೆಯನ್ನು ಬಿಟ್ಟು ಬಳ್ಳಾರಿ ಜಿಲ್ಲೆಗೆ ಬಂದು ಎಂಟು ಹತ್ತು ವರ್ಷಗಳಾದರೂ ಅವರಿಗೆ ತವರಿನ ಭಾಷೆ ಕೂಗಿ ಕರೆಯಿತ್ತೆನ್ನಬಹುದು, ಅಲ್ಲದೇ ಭಾಷೆಗೆ ಸಹಕಾರಿಯಾಗಿ ಅವರ ಶೈಲಿ ಅಥವಾ ತಂತ್ರ ಕಾದಂಬರಿಯಲ್ಲಿ ಹರಿದು ಬಂದಿದೆ, ಇಲ್ಲಿನ ದ್ವಿರುಕ್ತಿ, ನುಡಿಗಟ್ಟುಗಳು, ಬೈಗಳುಗಳು, ನಾಟಕೀಯ ಸಂಭಾಷಣೆಗಳು, ಗ್ರಾಮ ಮತ್ತು ವ್ಯಕ್ತಿ ನಾಮಗಳು ಇವೆಲ್ಲ ದಲಿತರ ಜೀವನಕ್ಕೆ ಪ್ರತಿಯಾಗಿ ನಿಂತಿವೆ ಎಂಬುದು ಕಾಣಬಹುದು.

ಕೊಡಗಿನ ಪ್ರಾದೇಶಿಕ ಕನ್ನಡದ ಸಮರ್ಥವಾದ ಬಳಕೆಯಿಂದ ಈ ಕಾದಂಬರಿ ಓದುಗರ ಗಮನ ಸೆಳೆಯುತ್ತದೆ. ಇಲ್ಲಿ ಗ್ರಾಮ್ಯ ಭಾಷೆಯೂ ಕೇವಲ ಪಾತ್ರಗಳ ಮಾತಾಗಿ ಮಾತ್ರವಲ್ಲ ನಿರೂಪಣೆಯ ಭಾಷೆಯಾಗಿಯೂ ಇಡೀ ಕಾದಂಬರಿಯ ಉದ್ದಕ್ಕೂ ನಡೆದು ಬಂದಿದೆ, ಇಲ್ಲಿ ನಾಗೇಶರವರು ಓದುಗರ ಅಭಿರುಚಿಗೆ ತಕ್ಕಂತೆ ಭಾಷೆಯನ್ನು ಬದಲಾಯಿಸದೆ, ಭಾಷೆಗೆ ತಕ್ಕಂತೆ ಓದುಗರ ಅಭಿರುಚಿಯನ್ನು ಬದಲಾಯಿಸುವ ಪ್ರಯೋಗಶೀಲತ್ವ ಗುಣಕ್ಕೆ ಕೈ ಹಾಕಿ ಸೈ ಎನಿಸಿಕೊಂಡಿದ್ದಾರೆ. ತಮ್ಮ ವಿಶಿಷ್ಟವಾದ ಭಾಷಾ ಲಯದಿಂದ ಓದುಗರನ್ನು ಮಂತ್ರ ಮುಗ್ಧರನ್ನಾಗಿ ಮಾಡಿದ್ದಾರೆ ಓದುಗರು ತಮಗೆ ಈ ಭಾಷೆ ಅರ್ಥವಾಗದೆಂದು ದೂರ ಸರಿದು ಕಾದಂಬರಿಯ ಭಾಷೆ ಅವರನ್ನು ಆಕರ್ಷಿಸುವುದು. ಆದರೂ ಹೆಬ್ಬಾಲೆಯವರ ದಲಿತರ ಪರವಾದ ಮೌನ ಹೋರಾಟ ಗುರಿತಲುಪುವುದು ಇದರ ವಿವೇಚನೆ ಗ್ರಾಂಥಿಕ ರೂಪಕ್ಕಿಳಿದಾಗ ಮಾತ್ರ ಈ ನಿಟ್ಟಿನಲ್ಲಿ ಕೆಲಸ ನಡೆಯಬೇಕಾದ ಅನಿವಾರ್ಯತೆಯನ್ನ ತುಂಬಲು ನನ್ನಿ ಕಾರ್ಯ ರಾಮ ಸೇತುವೆ ನಿರ್ಮಾಣದಲ್ಲಿ ಅಳಿಲಿನ ಸೇವೆಯಂತೆ ಚಿಕ್ಕದಾದ ಪ್ರಯತ್ನವಾಗಿದೆ. ಕಾರಣ ಅರಳವ್ವನ ಬದುಕಿನ ಹಿನ್ನಲೆಯಲ್ಲಿ ದಲಿತರ ಬದುಕಿನ ಚಿತ್ರಣವನ್ನು ಪ್ರತಿಬಿಂಬಿಸುವ ಈ ಕಾದಂಬರಿಯನ್ನು ಓದುಗರು ಅರ್ಥಮಾಡಿಕೊಂಡು ದಲಿತರ ಬದುಕನ್ನ ಚೇತರಿಸಲು ಮುಂದಾದಾಗ ಡಾ॥ ಹೆಬ್ಬಾಲೆಯವರ ಈ ಕಾದಂಬರಿಯೂ ಮಾತ್ರವಲ್ಲದೆ ಅವರ ಹೆಚ್ಚಿನ ಬರಹಗಳ ಉದ್ದೇಶ ಆಶಯಗಳೆಲ್ಲವೂ ಸಾರ್ಥಕವಾಗುತ್ತದೆ.

ಗ್ರಾಂಥಿಕ ಕನ್ನಡಕ್ಕೂ – ಅರಳವ್ವನ ಭಾಷೆಗೂ ಇರುವ ಭಿನ್ನತೆ

ಕೈಯಂಚಿನ – ಕೈಹಂಚಿನ : ಯ > ಹ

| | | | | |
|---|---|---|---|---|
| ಯಣ್ಣಗಕ್ಲು | – | ಹೆಣ್ಣುಮಕ್ಕಳು | : | ಯ > ಹ |
| ಚಾರಿ | – | ಕೇರಿ | : | ಚ > ಕ |
| ಅಟ್ಟಿಯಾ | – | ಹಟ್ಟಿಯ | : | ಅ > ಹ |
| ಯಲೆಡ್ಕೆ | – | ಎಲೆ ಅಡಿಕೆ | : | ಯ > ಎ |
| ಒಲ್ಸ | – | ಹೊಲಸು | : | ಒ > ಹೊ |
| ಐಟ್ಟೇಲಿ | – | ಹೊಟ್ಟೆಯಲ್ಲಿ | : | ವ > ಹೊ |
| ಬಿರ್‌ನೆ | – | ಬೇಗನೆ | : | ಬಿ > ಬೇ |
| ಯೇಟೊತ್ತು | – | ಎಷ್ಟು ಹೊತ್ತು | : | ಯೆ > ಎ |

ಹೀಗೆ 'ಹ' ಕಾರ 'ಯ' ಕಾರ ವಾಗಿಯೂ 'ಕ' ಕಾರ 'ಚ' ಕಾರವಾಗಿ 'ಎ' ಕಾರ 'ಯ' ಕಾರವಾಗಿಯೂ ಬದಲಾಗಿದ್ದು ಕೆಲವೊಮ್ಮೆ ಅವುಗಳ ಅರ್ಥಗ್ರಹ ಸರಳವಾಗಿ ಎಟುಕದೇ ಹೋಗುತ್ತದೆ, ಇಡೀ ಕಾದಂಬರಿ ತುಂಬ ಈ ರೀತಿಯ ಹರಿವು ನಿರಂತರವಾಗಿದೆ.

ಜೋಡುನುಡಿಗಳು :– ಭಾಷೆಯನ್ನು ಪರಿಣಾಮಕಾರಿಯಾಗಿ ಬಳಸುವುದಕ್ಕಾಗಿ ಒಂದು ಅರ್ಥವುಳ್ಳ ಶಬ್ದದೊಂದಿಗೆ ಯಾವುದೇ ಅರ್ಥವಿರದ ಒಂದು ಶಬ್ದವನ್ನು ಜೊತೆಯಾಗಿ ಬಳಸುವುದರಿಂದ ಓದುಗರ ಆಸಕ್ತಿ ಇಮ್ಮಡಿಗೊಳ್ಳುವುದೆಂಬ ಕಾರಣದಿಂದಲೂ ಹೇಳುವ ಭಾವನೆ ಪೂರ್ತಿಯಾಗಲಿ ಎನ್ನುವ ಕಾರಣಕ್ಕಾಗಿಯೂ ಈ ರೀತಿಯಾಗಿ ಬಳಸಿದ್ದಾರೆ.

ಉದಾ: ಕಸಗಿಸ, ಕೂಲಿಗಿಲಿ, ಎಳಿಕೆ ಪಳಿಕೆ, ಪೂಜೆಗೀಜೆ, ಅಸಿಟ್ಟುಪಸಿಟ್ಟು, ಬರಗೀರ, ಇಲ್ಲಿ ಪೂರ್ವ ಪದಗಳಿಗೆ ಅರ್ಥವಿದ್ದು, ಉತ್ತರ ಪದಗಳಿಗೆ ಯಾವುದೇ ರೀತಿಯ ಅರ್ಥವಿಲ್ಲ ಈ ರೀತಿಯ ಪದಗಳು ಕಾದಂಬರಿಯ ತುಂಬೆಲ್ಲಾ ಹರಡಿ ನಿಂತಿರುವುದು ಕಾಣುತ್ತೆವೆ.

ಶೈಲಿಯಿಂದಾಗಿ ಅರಳವ್ವ ಕಾದಂಬರಿ ತುಂಬಾ ವಿಶಿಷ್ಟವಾಗಿ ತನ್ನನ್ನು ತಾನು ಗುರುತಿಸಿಕೊಂಡಿದೆ. ನಾಗೇಶರವರು ತಮ್ಮ ಸಾಹಿತ್ಯ ರಚನೆಯಲ್ಲಿ ಭಾಷೆಯ ಧ್ವನಿ, ರೂಪ, ಅರ್ಥ, ಶಬ್ದ, ಪದ ಹಾಗೂ ವಾಕ್ಯಗಳು ಪ್ರಮುಖವಾಗಿ ತನ್ನ ಲಯವನ್ನು ಬದಲಿಸಿಕೊಳ್ಳುವುದು ಕಾಣುತ್ತೇವೆ. ಈ ಭಾಷೆ ಶೈಲಿಯಿಂದ ಜನಪದರಲ್ಲಿ ಪ್ರಚಲಿತವಿದ್ದ ಜಾತ್ರೆ, ಹಬ್ಬ, ಹರಿದಿನ, ಮಾಟಮಂತ್ರ, ಮೇಲು ಕೀಳು ಎಲ್ಲವೂ ಹಿಡಿಪಡಲಾಗಿದೆ. ಇದು ನಾಗೇಶರವರ ಭಾವಾಭಿವ್ಯಕ್ತಿಯ ಅನಿವಾರ್ಯತೆಯಾಗಿರುವುದರ ಜತೆಗೆ ಹೊಸ ಪ್ರಯೋಗದ ದಾರಿಯಾಗಿತ್ತು.

ಗಾದೆ ಮಾತುಗಳು :- ಗಾದೆಗಳು ಜನಪದ ಸಮುದಾಯದ ಅನುಭವದ ಭೂತುಗಳಾಗಿರುತ್ತವೆ. ಗಾದೆ ಜನರ ಆಚಾರ, ನಡುವಳಿಕೆ, ಅವರ ಚಟಗಳನ್ನು ತಿಳಿಸುತ್ತವೆ. ಗಾದೆ ಒಳ್ಳೆ ದಾರಿಯನ್ನ ತೋರಲು ಚಾಟಿ ಏಟಿನಂತೆ ಮಾಡುತ್ತದೆ. ಅದಕ್ಕೆ ವೇದ ಗಾದೆ ಸುಳ್ಳಾದರೂ ಗಾದೆ ಸುಳ್ಳಾಗದು ಎಂಬ ಮಾತು ಸತ್ಯವಾದದ್ದು, ಒಂದು ಸೃಜನಶೀಲ ಬರವಣಿಗೆ ಯಶಸ್ವಿಯಾಗಬೇಕಾದರೆ ಅದು ಅಲ್ಲಿ ಒಂದು ಸಮಾಜದ ಒಟ್ಟು ಪರಿಕರ ತನ್ನೊಡಲಲ್ಲಿ ಹೊತ್ತು ನಿಂತಿರಬೇಕು ಇದಕ್ಕೆ ಕಾದಂಬರಿ ಕ್ಷೇತ್ರವು ಹೊರತಾದುದ್ದಲ್ಲ, ಗಾದೆಯ ಮಾತುಗಳು ಪ್ರಾದೇಶಿಕತೆಯ ಪಡೆನುಡಿಗಳು. ಈ ಗಾದೆ ಮಾತು ಜನಪದರಲ್ಲಿ ಹಾಸು ಹೊಕ್ಕಾಗಿವೆ. "ಮೂರ್ತಿ ಚಿಕ್ಕದಾದರೂ, ಕೀರ್ತಿ ದೊಡ್ಡದು" ಹೊಂದಿರುವವು. ತಮ್ಮ ಜೀವನದಲ್ಲಿ ಪಡೆದ ಅನುಭವಗಳ, ಒಬ್ಬನ ಬಾಯಲ್ಲಿ ಗಾದೆಗಳಾಗಿ ನಂತರ ಸಾರ್ವತ್ರಿಕ ಮುದ್ರೆಯನ್ನು ಪಡೆದವುಗಳು.

ಕಾದಂಬರಿಯಲ್ಲಿ ಬರುವ ಗಾದೆಗಳನ್ನಿಲ್ಲಿ ಕೆಲವು ಉದಾಹರಿಸಬಹುದು.

"ಕುಲ್ಕೆ ಕುಲ ಮೂಲ ಕುಂಟೆತ್ತಿಗ ವಲಮೂಲ", (ಅರಳವ್ವ ಪ್ರ-2)

"ಉತ್ತರ ಪೌರುಷ ಒಲೆ ಮುಮದೆ", ಅನ್ಯೊಂಗೆ ಈ ಪೊಗರ ಮಾತು ನನ್ನಬೊದ್ದೆ ಮುಂದೆಯಾ (ಪು-22)

"ಕುಲ್ಕೆ ಬಡತನ ಇದ್ರುವೆ ಕೂಳಿಗೆ ಬಡತನ ಆದ (ಪು-26)

"ಮನೇಲಿ ಯಾನು ಇಲ್ದೆ ಇದ್ರುವೆ ಮನೆಗಾರಿಕೆ ಬೊಲ", (ಪು-51)

"ಆಡು ಕಾಯೊಪಕೆ ನಾಡ ಕಾಯಾಕಾಯ್ತದಾ", (ಪು-76)

"ಇವ್ರ್ನ ಇಂಗೆ ಬುಟ್ಟರೆ ತಲೆಮ್ಯಾಗ ಕುರಿತುಬುಡ್ತವೆ ಶೂದ್ರಗುಟ್ಟಿದ್ದು", (ಪು-76)

ಹೀಗೆ ಕಾದಂಬರಿ ತುಂಬ ಹೇಳುವ ಮಾತನ್ನು ಪರಿಣಾಮಕಾರಿಯಾಗುವಂತೆ ನಾಗೇಶರು ಗಾದೆ ಮಾತುಗಳನ್ನ ಸಂದರ್ಭಕ್ಕೆ ತಕ್ಕಂತೆ ಬಳಸಿಕೊಂಡಿದ್ದಾರೆ.

ಬೈಗಳುಗಳು :- ಸಮಾಜದ ಏರುಪೇರುಗಳನ್ನು ಸರಿಪಡಿಸಲು ಅನುಭವವುಳ್ಳವರು ಇವುಗಳನ್ನು ಬಳಸುತ್ತಾರೆ. ನಾಲಿಗೆಗೆ ಸಂಸ್ಕಾರವಿಲ್ಲದವರು ಇವುಗಳನ್ನ ಬಳಸುತ್ತಾರೆ. ಈ ಬೈಗಳುಗಳು ಹೊಲಸಾಗಿ ಕಂಡರು ಅವು ತಪ್ಪು ಮಾಡಿದವರನ್ನು ತಿದ್ದುವ ಅಸ್ತ್ರಗಳಾಗಿವೆ. ಅಲ್ಲದೆ ಜನಪದರಲ್ಲಿ ಸ್ವಾಭಾವಿಕವಾಗಿ ದಿನನಿತ್ಯದಲ್ಲಿ ಇವುಗಳೂ ಉಪಯೋಗಿಸಲ್ಪಡುತ್ತವೆ. ಬೈಗಳುಗಳು, ಸಮಾಜದ ಎಲ್ಲೆಡೆ ಪಸರಿಸಿರುತ್ತವೆ. ಆದರೆ ಜನರ ಜ್ಞಾನದ ಮಟ್ಟ ಆಧಾರಿಸಿ ಅವು ತಮ್ಮ ಸ್ವರೂಪ ಬದಲಿಸಿಕೊಂಡಿರುತ್ತವೆ. ಹೆಬ್ಬಾಲೆಯ ಸುತ್ತಲಿನ ಪ್ರದೇಶದಲ್ಲಿ ಅದರಲ್ಲೂ ಕೆಳವರ್ಗದವರೆಂದೆ ಭಾವಿಸಲ್ಪಡುವ ದಲಿತರಲ್ಲಿ ಪ್ರಚಲಿತದಲ್ಲಿದ್ದ ಬೈಗಳುಗಳು ಈ ಕಾದಂಬರಿಯಲ್ಲಿ ಕಾಣಬಹುದು.

"ನಾಕಂಡಿಲ್ವ ನಿಮ್ಮ ಸುಪ್ನಾತೀತನವಾ" (ಅರಳವ್ವ ಪು–2)

"ನಿಮ್ಮ ಹೊಲ್ಸ ಒಳಸ್ಯಾಡ", (ಅರಳವ್ವ ಪು–2)

"ನಿನ್ನ ಆದ್ರತನದ ಬುದ್ಧಿ ನನ್ನ ಮುಂದೆ ತೊರಿಸ್ಸಾಬ್ಯಾಡ (ಅರಳವ್ವ ಪು–24)

"ಯೆನ್ಲಾ ಊರ್ ಸೂಳೆ", (ಅರಳವ್ವ ಪು–24)

"ಲೇ ನಾಯಿ ಅದೇ ಪಂಚಾಯ್ತಿ ಕಟ್ಟಲಿ ನಿನ್ನ ನಿನ ಮಗಳ ಮಾನವ ಹರಾಜ ಹಾಕ್ತಿನಿ (ಅರಳವ್ವ ಪು_24)

"ಥೂ ಬೋಳಿ ಮಗನೆ ವಸಿ ಜಾನ ಬ್ಯುಡವಾ ನಿಂಗೆ (ಅರಳವ್ವ ಪು_41)

"ಈ ಮುಂಡೆಮಕ್ಕಳು ತಿರುಗಿ ನ್ವಾಡದೆಯಾ ಗೊತ್ತೆ ಇಲ್ಲಾ ಅನ್ನೊ ಹಂಗೆ ಹೋಕ್ತಾರೆ (ಅರಳವ್ವ ಪು–41)

ಹೀಗೆ ಜಗಳಗಳು ಪ್ರಾರಂಭವಾದಾಗ ಕೋಪ ಬಂದಾಗ ಈ ಬೈಗಳುಗಳು ಪಠನ ನಡೆಯುತ್ತಿರುತ್ತವೆ. ಹಾಗೇಯೇ ಇಲ್ಲಿಯೂ ಅವುಗಳು ನೆಲೆನಿಂತಿವೆ.

ಉಪಮೇ – ರೂಪಕಗಳು :– ಯಾವುದೇ ಒಂದು ವಿಷಯ ಬಣ್ಣನೆ ಮಾಡುವಲ್ಲಿ ಅದನ್ನು ಇನ್ನೊಂದರ ತೆಂದು ಹೊಲಿಸಿ ಹೇಳುವಲ್ಲಿ ಇವುಗಳು ಬಳಕೆಯಾಗುತ್ತದೆ. ಅದು ಒಳ್ಳೆಯ ಅಂಶಗಳಾಗಿರಬಹುದು. ನಗಾಡಿಕೆಗಾಗಿರಬಹುದು. ಬೈಯುವುದಕ್ಕಾಗಿರ ಬಹುದಾಗಿದೆ.

ಸಂಭಾಷಣೆಗಳೂ :– ಸಂಭಾಷಣೆ ಎಂದೊಡನೆ ನಾಟಕದ ಹೆಸರಿಗೆ ಹೋಗುವುದು ಸರಿಯಲ್ಲ ಕತೆ, ಕಾದಂಬರಿ, ಕಾವ್ಯಗಳಲ್ಲಿಯೂ ಪಾತ್ರ–ಪಾತ್ರಗಳ ನಡುವಣೆ ಮಾತುಕತೆಗಳು ನಡೆಯುತ್ತವೆ. ಇಲ್ಲಿಯೂ ಹಲವಾರು ಪಾತ್ರಗಳಿದ್ದು ಒಂದಕ್ಕೊಂದು ಪ್ರಶ್ನೋತ್ತರಗಳ ರೂಪದಲ್ಲಿ ಚರ್ಚಾಸ್ಪದ ರೂಪದಲ್ಲಿ ಸಂಭಾಷಣೆಯನ್ನ ನಡೆಸುವುದು ಅಲ್ಲಲ್ಲಿ ಕಾಣಬಹುದು.

"ಸಿಂಗ್ರಿ – ಧೂಧರಿಕ ಣೀ ಮಲ್ಲಿ, ಮಲ್ಲಿ ಎಲ್ಲಿದ್ದಿಚುಣ ಅಂದಾಗ

"ಅರಳಿ – ಅವ್ರು, ಒಳ್ಳೆಣೆತ್ತರಕ್ಕೆ ಊರಳ್ಳತ್ತಕೆ ಓಗವುರೆ, ಅಚಿತೇಳೀದ್ಲು

ಸಿಂಗ್ರಿ – ಅಲ್ಲಾಕನ್ ಮೊಗ, ನೀನಾರುವೆ ಯಬ್ಬಿಸೋದು ಅಲ್ವಾ ?'

ಅರಳ್ಳಿ – ಅಚಿತ್ಲೆಯಾ ಸುಮ್ಕೆ ಆದೆ", (ಅರಳವ್ವ ಪು–19)

ಕುಳ್ಳ – ದೊಡಪ್ಪಾ ದೊಡಪಾಂಥ ಕರ್ದ

ಸಿಂಗ್ರಿ – ಯಾರ್ಲ ಅವನು ? ಕಣ್ಣರಳ್ಸಿ ನ್ವಾಡ್ದ

ಕುಳ್ಳ – ಇದ್ಯಾಕ್ ದೊಡಪಾ ನಾಕುಳ್ಳಲ್ವಾ

ಸಿಂಗ್ರಿ – ಓ ಬಾ ಮೊಗಾ ಇತ್ಲಾಗಿ, ಯಾನು ಯಾವೊತ್ತು ಬರ್ದೋ್ಣೀನು, ಇವೊತ್ತು ನಮ್ಮ ಹಟ್ಟಿ ಕುಣ್ತಾ? ನನ್ನ ಇರಿ ಆಯಿದ ಸತ್ತಾಗ ಬಂದಿದ್ದೆ, ನಾ ಸತ್ತಿವ್ನಿ ಇಲ್ವಾಂಥ ಹಂಗತ್ತೀಯ.

ಕುಳ್ಳ – ಅದ್ಯಾಕ ದೊಡಪ ಹಂಗತ್ತಿಯಾ, ನಮ್ಮ ಕುಟುಂಬ್ಕೆ ನೀನ್ ಇರಿಕ, ನಮ್ಗೆ ನೀನ್ ಬುಟ್ರೆ ಯಾರವ್ರೆ?

ಸಿಂಗ್ರಿ – ಹಟ್ಟಿಲಿ ಯಲ್ಲ ಬಂದ್ಗಾವ್ರ ?

ಕುಳ್ಳ – ನಿಂಗ ಗೊತ್ತಲಾ ಮನೆಬಾರ ಯಲ್ಲವ ನನ್ನ ಮ್ಯಾಗೆ ಅದೆ, ಯಾರೂ ಜೈದ, ತಂದುಕಾಕೊರಿಲ್ಲ,
ಕೂಲಿ ಮಾಡಿ ಇಟ್ಟ ಎಣ್ಣೇಕ,

ಸಿಂಗ್ರಿ – ನಾವ್ಯಾನು ಬೆಳ್ಳು ಮಡಿಕೊಂಡಿವಾ ಯಾನ್ ಬಂದೆ ?

ಕುಳ್ಳ – ಒಂದಿಚಾರ ಮಾತಾಡ್ಬೇಕಿತ್ತು

ಸಿಂಗ್ರಿ – ಯಾನದು ?

ಹೀಗೆ ಇವರಿಬ್ಬರ ಪಾತ್ರಗಳ ಚರ್ಚೆ ಸಾಗುತ್ತಲೇ ಇರುತ್ತವೆ, ಇವುಗಳನ್ನ ಹೊರತು ಪಡಿಸಿ ಅನೇಕ ಸಂದರ್ಭದಲ್ಲಿ ಬೇರೆ ಬೇರೆ ಪಾತ್ರಗಳು ಡೈಲಾಗ್ ರೂಪದಲ್ಲಿ ಮಾತಾಡುತ್ತವೆ.

ಪಾತ್ರಗಳ ಮನೋವಿಶ್ಲೇಷಣೆ :- ಮನುಷ್ಯ ಜೀವನವೆಂದಾಗ ಅಲ್ಲಿಯ ಜೀವನ ಒಬ್ಬರಿಂದ ಸಾಗದು, ಸಂಬಂಧಗಳು, ನೆರೆಹೊರೆಯವರು ಊರಿನವರು ಎಂದು ಸಮೂಹ ಬದುಕು ಸಾಗುತ್ತಿರುತ್ತದೆ. ಅದಕ್ಕೆ ಅರಿಸ್ಟಾಟಲ್ "ಮನುಷ್ಯ ಸಾಮಾಜಿಕ ಪ್ರಾಣಿ (Man is a Social animal) ಎಂದು ಹೇಳಿರುವನು ಅದರಲ್ಲೂ ಜನಪದರು ಒಬ್ಬರನ್ನೊಬ್ಬರು ಕೊಡುಕೊಳ್ಳುವಿಕೆ ಒಬ್ಬರ ಸುಖ ದುಃಖಗಳಲ್ಲಿ ಇನ್ನೊಬ್ಬರ ಭಾಗಿಯಾಗುವಿಕೆ. ಒಬ್ಬರನ್ನೊಬ್ಬರು ಕಂಡು ಅಸೂಯೆ ಪಟ್ಟು ಕೊಳ್ಳುವುದು ಹೀಗೆ ಈ ಅಂಶಗಳು, ಅಲ್ಲಿ ಕ್ರೂಢಿಕರಿಸಿ ಕೊಂಡಿರುತ್ತಾರೆ. ಹಾಗೆಯೇ ಇಲ್ಲಿಯೂ ಅರಳವ್ವನ ಸಂಸಾರ, ದಾಯಾದಿಗಳು ನೆರೆಹೊರೆಯವರು ಆಜ್ಞೆ ಮಾಡುವ ಹಾಗೂ ಕೆಲಸವನ್ನು ಅನ್ನವನ್ನು ನೀಡುವ ವರ್ಗ ಇವೆಲ್ಲರೂ ಕಾದಂಬರಿಯಲ್ಲಿ ಪಾತ್ರಧಾರಿಗಳಾಗಿ ಒಂದು ಪರಿಪೂರ್ಣ ಸಮಾಜವನ್ನು ನಿರ್ಮಿಸಿದ್ದಾರೆ ಇಲ್ಲಿ ಕವಿಗಳ ಆಶಯದಂತೆ ಪ್ರಮುಖವಾದ ಪಾತ್ರಗಳ ಉಪ ಪಾತ್ರಗಳು ಪೂರಕ ಪ್ರೇರಕ ಸಹಾಯಕವಾಗಿ ನಿಂತಿವೆ.

ಅರಳ್ಳಿ :- ಕಾದಂಬರಿಯ ಪ್ರಮುಖ ಪಾತ್ರಧಾರಿ ನಾಯಕಿ ಈ ಅರಳೀ ಕೆಲವರು ಇವಳನ್ನ ಅರಳೀ ಅಂತ ಕರೆದರೀ ಇನ್ನುಳಿದವರು ಅರಳವ್ವ ಅರಳಕ್ಕ ಎಂದು ಕರೆಯುತ್ತಿದ್ದರು. ಸಹನೆಗೂ ಮತ್ತು ಛಲಕ್ಕೂ ಹೆಸರು ಪಡೆದವಳು ಯಾರು ಏನೆಂದರೂ ಎದುರುವಾದಿಸದೇ ಗಂಡನಿಗೆ ಬೆನ್ನೆಲುಬಾಗಿ ನಿಂತು ಮಕ್ಕಳ ಜೀವನವನ್ನು

ಹಸನು ಮಾಡಿದಳು ಅನೇಕ ಕಷ್ಟ, ನೋವುಗಳನ್ನು ಅನುಭವಿಸಿಯೂ ಸಹ ಎದೆಗುಂದದೆ ಬದುಕಿ ಬಾಳಿದವಳು ಅರಳವ್ವ ಇವಳ ಜೀವನಕ್ಕೆ ಪ್ರತಿಬಿಂಬವಾಗಿಯೇ ದಲಿತರ ಜೀವನವನ್ನು ಹಿಡಿದಿಡಲಾಗಿದೆ.

ಮರಿದಂಡ :- ಅರಳೀಯ ಮೈದುನದು ಎರಡನೇ ಗಂಡನೂ ಆಗಿದ್ದ ಈತ ಸಿಂಗ್ರಿ ಮತ್ತು ಮಲ್ಲಿಯ ಎರಡನೇ ಪುತ್ರ ಯಾವುದೇ ಜ್ಞಾನ ಇಲ್ಲದ ಕೇವಲ ಕತ್ತೆಯಂತೆ ದುಡಿಯುವವನಾಗಿದ್ದ ಬಡಿಸಿದರೆ ತಿನ್ನುತ್ತಿದ್ದ ಇಲ್ಲವಾದರೆ ಹಗೆ ಮಲಗುತ್ತಿದ್ದು, ಅರಳೀ ಜೊತೆ ಕೂಡಾವಳಿ ಮಾಡಿಕೊಂಡ ಈತ ತಂದೆಯ ನಂತರ ಕುಲ್ವಾಡಿ ಕೆಲಸ ಮಾಡಿಕೊಂಡು ಹೋಗುತ್ತಿದ್ದ, ಒಂದು ದಿನವಾದರೂ ಯಾರೊಂದಿಗೂ ಜಗಳವಾಡಿದ ಮನುಷ್ಯ ಅಲ್ಲ. ಅರಳಿಗೆ ಸರಿಯಾದ ಜೋಡಿಯಾಗಿದ್ದ ಕೊನೆಗೆ ವೃದ್ಧಾಪ್ಯದಲ್ಲಿ ಒಂದು ದಿನ ಸಾವಿಗೆ ಶರಣಾದ.

ಸಿಂಗ್ರಿ :- ಹೆಬ್ಬಾಲೆಯ ಕುಲ್ವಾಡಿಕೆ ಕೆಲಸವನ್ನು ಮಾಡಿಕೊಂಡು ಬರುತ್ತಿದ್ದ ಈತ ಊರಿನಲ್ಲಿ ಯಾರೋಂದಿಗೆ ದ್ವೇಷ ಕಟ್ಟಿಕೊಂಡ ವ್ಯಕ್ತಿಯಲ್ಲ, ಈತನ ಹೆಂಡತಿ ಮಲ್ಲಿ ಯಾವಾಗಲೂ ಒಟ ಒಟ ಎನ್ನುತ್ತಲೆ ಇರುವ ಈಕೆ ಮನೆಕೆಲಸ ಮಾಡಿಕೊಂಡು ಇರುತ್ತಿದ್ದಳು ಸಿಂಗ್ರಿಗೆ ಮೂವರು ಮಕ್ಕಳು ದೊಡ್ಡಹೈದ ಚಂಗ ಎರಡನೇಯವನು ಬೊಂಬ್ರ ಚಿಕ್ಕವನೇ ಮರಿದಂಡ ಮಕ್ಕಳು ಹಿರಿಯರಿಗೆ ಗೌರವ ಕೊಡಬೇಕು ತಂದೆ-ತಾಯಿಚುರಿಗೆ ಕೆಲಸದಲ್ಲಿ ಸಹಾಯ ವಾಗಬೇಕು ಎನ್ನುವವನು ಆದರೆ ಮಕ್ಕಳಿಗೆ ದುಡಿಯಲು ಹಚ್ಚಿ ಕೂತು ತಿನ್ನುವವನು ಅಲ್ಲವೇ ಅಲ್ಲ ಜಾತಿ ವ್ಯವಸ್ಥೆಯಲ್ಲಿ ನಂಬಿಕೆ ಇಟ್ಟು ಪಾಲಿಸಿಕೊಳ್ಳತ್ತಿದ್ದ ಹೆಣ್ಣಿಗೆ ಬಾಳುವ ಸ್ವಾತಂತ್ರ್ಯ ನೀಡಬೇಕೆಂಬ ಮನಸ್ಸು ಇವನಗಿತ್ತು ಎಂಬುದನ್ನು ಅರಳವ್ವನನ್ನ ತನ್ನ ಮಗ ಮರಿದಂಡನೊಂದಿಗೆ ಕೂಡಾವಳಿ ಮಾಡಿರುವುದು ಕಾಣಬಹುದು.

ಪಟೇಲರು :- ಸಮಾಜದಲ್ಲಿ ಜಾತಿ ವ್ಯವಸ್ಥೆ ಕಡ್ಡಾಯವಾಗಿರಬೇಕು ಕೆಳವರ್ಗದವರು ಸವರ್ಣೀಯರಿಗೆ ಋಣೀಯಾಗಿರಬೇಕು. ಅವರು ತಮ್ಮ ಮನೆಯ ಎಲ್ಲಾ ಕೆಲಸಗಳನ್ನ ಮಾಡಬೇಕು. ಅವರಿಗೆ ಗೌರವ ನೀಡಬಾರದು ಎಂಬ ಮೇಲ್ ವರ್ಗದವರ ಶೋಷಣಾ ಮನೋಭಾವ ಇವರ ಪಾತ್ರದ ಮುಖಾಂತರ ವ್ಯಕ್ತಪಡಿಸಲಾಗಿದೆ.

ಕುಳ್ಳೆ ಗೌಡ :- ಕೆಳವರ್ಗದವರೆಂದಾಕ್ಷಣ ಪ್ರಾಣಿಗಳೆಂದು ತಿಳೀಯಬಾರದು ಆದರೆ ಅವರು ತಮ್ಮ ಕೆಲಸಗಳನ್ನು ಸರಿಯಾಗಿ ಮಾಡಿಕೊಂಡು ಹೋಗಲೆಬೇಕು ಎಂಬುದು ಇವರ ಆಶಯವಾಗಿತ್ತು. ಮೇಲ್ ವರ್ಗದವರು ಕೆಳವರ್ಗದ ಹೆಣ್ಣನ್ನು ವೇಶ್ಯಾವಾಟಿಕೆಗೆ ಬಳಸಿಕೊಳ್ಳುತ್ತಾರೆ. ಗಂಡಸರನ್ನು ತಮ್ಮ ಹೊಲಗಳಲ್ಲಿನ ಕೆಲಸಕ್ಕೆ ಬಳಸಿಕೊಳ್ಳುತ್ತಾರೆ. ಇವರು ಸರಾಯಿ ಅಂಗಡಿಗಳಿಗೆ ಹೋಗುತ್ತಿದ್ದರೆಂಬುದು ಇಲ್ಲಿ ತೋರಲಾಗಿದೆ.

ಈ ಪ್ರಮುಖ ಪಾತ್ರಗಳೆ ಅಲ್ಲದೆ ದಾಯಾದಿಗಳು ಮೇಲುನೋಟಕ್ಕೆ ಒಳ್ಳೆಯವರಾಗಿ ಕಂಡರು ನಮ್ಮ ನಾಶಕ್ಕೆ ಹೊಂಚು ಹಾಕುತ್ತಾರೆಂಬುದನ್ನು ತೋರುವ ಪಾತ್ರದಲ್ಲಿ ಕುಳ್ಳ ಮತ್ತು ಬೊಂಬ್ರನ ಪಾತ್ರಗಳು ನೆರೆಹೊರೆಯವರು ನಮ್ಮ ಒಳ್ಳೆಯದಕ್ಕೆ ಅಸೂಯೆ ಪಟ್ಟುಕೊಳ್ಳುತ್ತಾರೆ ಕೆಟ್ಟದಾರರೆ ನೋಡಿ ನಗುತ್ತಾರೆ ಎಂಬುದನ್ನ ಈರವ್ವ ಜವ್‌ರಿ, ಸಣ್ಣವ್ವ ಪುಡ್ತಾಯಿ ಪಾತ್ರಗಳಿಂದ ವ್ಯಕ್ತವಾಗಿದೆ ಕೆಳವರ್ಗದ ವ್ಯಕ್ತಿಗಳ ದೇಹ ಭಾಷೆ ನಡುವಳಿಕೆ ಯಾವ ರೀತಿ ಒರಟಾಗಿರುತ್ತದೆಂಬುದನ್ನು ಎದ್ದೂರ, ಚೂಡ ಸಣ್ಣ ಕಾಳ ಪಾತ್ರಗಳಲ್ಲಿ ಕಾಣಬಹುದು ಹೆಣ್ಣು ಏನು ಮಾಡಲು ಅಸಹಾಯಕ ಎಂಬುದನ್ನು ಊರ ಗೂಡ್ರ ಹೆಂಡತಿ ಶಾರದಮ್ಮನ ಪಾತ್ರದಲ್ಲೂ ವೇಶ್ಯಾವಾಟಿಕೆಯಲ್ಲಿ ತೊಡಗಿಸಿಕೊಂಡ ತಿಪ್ಪವ್ವನ ಪಾತ್ರಗಳು ಬರುತ್ತವೆ, ಇಷ್ಟ ಅಲ್ಲದೆ ಅನೇಕ ಪಾತ್ರಗಳು ಇಲ್ಲಿ ಒಂದು ಸಮಾಜದ ಭಿನ್ನ ಭಿನ್ನ ಅಂಶಗಳನ್ನು ವ್ಯಕ್ತ ಪಡಿಸಲು ಬಂದು ಹೋಗುತ್ತವೆ. ಒಂದು ತುನಜೀವನದಲ್ಲಿ ಜನ ಯಾವ ರೀತಿಯಾಗಿ ಬಾಳು ಸಾಗಿಸುತ್ತಿದ್ದಾರೆ ಎಂಬ ಅಂಶವನ್ನು ಅವರ ಸ್ಥಿತಿ-ಗತಿಗಳನ್ನು ಬಚ್ಚಿಡುವ ಕಾರ್ಯವನ್ನು ಅರಳವ್ವನ ಜೀವನದ ಹಿನ್ನಲೆಯಲ್ಲಿ ಅಭಿವ್ಯಕ್ತ ಪಡಿಸಿರುವ ಕವಿಗಳು ತಮ್ಮ ಹುಟ್ಟೂರಿನಲ್ಲಿ ಬಾಳಿ ಬದುಕಿದ ಅರಳವ್ವ ಜೀನವದಲ್ಲಿ ಏನೆಲ್ಲ ಏರಿಳೀತಗಳನ್ನು ಕಂಡಿದ್ದಾಳೆ. ಆ ಎಲ್ಲಾ ಸಮಸ್ಯೆಗಳು ಕೇವಲ ಆಕೆಯ ಪ್ರತಿನಿಧಿಯಾಗಿಲ್ಲ ಒಂದು ಜನವರ್ಗವನ್ನು ಪ್ರತಿನಿಧಿಸುತ್ತವೆ. ಕಾದಂಬರಿಯಲ್ಲಿ ಕಥೆ, ಭಾಷೆ, ಶೈಲಿ ಎಲ್ಲವೂ ನೈಜಸ್ಥಿತಿಯಲ್ಲಿ ಇದ್ದು ಇದಕ್ಕೆ ಯಾವುದೇ ಆಡಂಬರವಿಲ್ಲ ಆದಕಾರಣ ಅರಳವ್ವನಿಂದಲೇ ಆಕೆಯ ವೃತ್ತಾಂತವನ್ನು ತಿಳಿದುಕೊಂಡಿದ್ದು, ಇವರು ಆ ಪ್ರದೇಶದಿಂದಲೇ ಹುಟ್ಟಿ ಬಂದವರಾಗಿರುವುದರಿಂದ ಜನರ ದಿನನಿತ್ಯದ ಕಾರ್ಯಗಳು ಅವರ ಜೀವನೋಪಯೋಗಿ ಆಧಾರ ಅವರ ವೇಷಭೂಷಣ, ಹಬ್ಬ-ಹರಿದಿನಗಳು, ಜಾತ್ರೆಗಳೂ, ಅವಿಭಕ್ತ ಕುಟುಂಬ, ಮಕ್ಕಳು ತಮ್ಮ ಆಸ್ತಿಯೆಂದು ಭಾವಿಸಿರುವುದು, ಅವರ ಸಂಭಾಷಣೆ ರೀತಿ, ಅವರಲ್ಲಿನ ನಿತ್ಯ ಬಳಕೆಯ ನುಡಿಗಟ್ಟುಗಳು ಬೈಗಳುಗಳು ಗಾದೆಗಳು ಎಲ್ಲವು ಇಲ್ಲಿ ಹಿಡಿದಿಡಲಾಗಿದೆ. ಹೆಬ್ಬಾಲೆಯವರು ಹೆಬ್ಬಾಲೆ ಬಿಟ್ಟು ವರ್ಷಗಳೇ ಕಳೆದರು ಭಾಷೆಯಲ್ಲಿ ಸ್ವಲ್ಪವೂ ತಡವರಿಕೆಯಿಲ್ಲ, ಆದರೆ ಇದನ್ನು ಓದ ಹೊರಟ ಸಹೃದಯ ಮಾತ್ರ ತಡವರಿಸುವಂತೆ ಮಾಡಿದ್ದಾನೆ ಶಿಷ್ಟ ಸಾಹಿತ್ಯ ಪ್ರಚುರ ವಾಗಿರುವ ಸಂದರ್ಭದಲ್ಲೂ ನಮ್ಮ ನೆಲದ ಮಣ್ಣಿನ ವಾಸನೆ ಮರೆಯಬಾರದು ಎಂದು ತೀರ ಅನಕ್ಷರಸ್ಥರ ಬಡವರ ಹಳ್ಳಿಗರ ಕೆಳವರ್ಗದವರ ಹಿಂದುಳಿದ ಪ್ರದೇಶದವರ ಭಾಷೆಯನ್ನು ಬೆಳಕಿಗೆ ತರುವ ಮುಖಾಂತರ ಮಲೆನಾಡಿನ ತಪ್ಪಲಲ್ಲಿ ಯಾರಿಗೂ ಕಾಣದಂತೆ ಮರೆಯಲ್ಲಿ ಬದುಕುತ್ತಿರುವವರನ್ನು ಸಮಾಜಕ್ಕೆ ಪರಿಚಯ ನೀಡುವ ಹಂಬಲದಿಂದ ಅರಳವ್ವ ಕಾದಂಬರಿಯನ್ನು ಓದುವ ವರ್ಗಕ್ಕೆ ಜನರ ಬದುಕನ್ನು ಅರ್ಥಮಾಡಿಕೊಳ್ಳುವ ಮನಸ್ಸುಗಳಿಗೆ ಕೊಡುಗೆಯಾಗಿ ನೀಡಿದ್ದಾರೆ ಇದನ್ನು ಸಹೃದಯರು ಒಪ್ಪಿಕೊಂಡು ಅದರ ಉದ್ದೇಶ ಈಡೇರಿದಾಗ ಕವಿಯೊಬ್ಬರ ಮಹಾದಾಸೆ ನೇರವೇರಿದಂತೆಯೇ ಸರಿ.

## ಬಿ) ಬಾಡಿಗೆ ದೇವರು

ಇದೊಂದು ಕಥಾ ಸಂಕಲನ. ಒಟ್ಟಾರೆಯಾಗಿ ನಾಲ್ಕು ಕಥೆಗಳನ್ನು ಒಳಗೊಂಡಿದೆ,

1. ಕಲ್ಯಾಣಿ,
2. ಬಾಡಿಗೆ ದೇವರು
3. ಊರಿಗೆ ಬಂತು ಟೂರಿಂಗ್ ಟಾಕೀಜ್
4. ಹಂದಿ ಬಡಿಗೆ
5. ಕರೆ

ನಾಲ್ಕು ಕಥೆಗಳು ನೈಜತೆಗೆ ಹತ್ತಿರವಾಗಿದ್ದು. ತಮ್ಮದೇ ಆದ ತಂತ್ರ, ಶೈಲಿಗಳಿಂದ ಕೊಡಿವೆ ಹೆಬ್ಬಾಲೆಯವರ ಸೊಗಸಾದ ನಿರೂಪಣೆಯಲ್ಲಿ ಸುಂದರವಾಗಿ ಮೂಡಿಬಂದಿವೆ. ಪ್ರತಿಯೊಂದು ಕಥೆಗಳು ಮೊದಲಿಂದ ಕೊನೆಯವರೆಗೂ ಆಸಕ್ತಿಯನ್ನು ಕೆರಳಿಸುತ್ತಾ ಇನ್ನೇನು ಕಥೆ ಹೀಗೆ ಮುಗಿಯಬಹ್ಮದೆಂದು ಊಹಿಸುವಷ್ಟರಲ್ಲೆ ಮತ್ತೊಂದು ತಿರುವಿನಲ್ಲಿ ಘಟನೆಗಳು ಉರುಳುತ್ತವೆ. ಅದಕ್ಕೆ ಕಥೆಗಳು ಎಲ್ಲಿಯೂ ಶುಷ್ಕವಾಗಿರದೆ ಓದುಗರನ್ನು ಆಸಕ್ತಿಯಿಂದ ಸೆಳೆದೊಯ್ಯುತ್ತವೆ. ಇಲ್ಲಿ ಬರುವ ಕಲ್ಯಾಣಿ ಕಥೆಯೂ ಪ್ರೇಮ ಕಥೆಯಾಗಿದ್ದು ದುರಂತದಿಂದ ಅಂತ್ಯ ಕಾಣುವ ನಾಯಕನ ಚಿತ್ರಣವನ್ನು ಹೃದಯ ವಿದ್ರಾವಕವಾಗಿದೆ. ಇತರ ಕಥೆಗಳು ತಮ್ಮದೇ ಆದ ವಿಶಿಷ್ಟತೆಯನ್ನು ಹೊಂದಿವೆ.

**ಕಲ್ಯಾಣಿ:**

ಕಲ್ಯಾಣಿ ಕಥಾನಾಯಕ, ಚಂದ್ರಶೇಖರ ಕಂಬಾರರ ಚಕೋರಿಯ ನಾಯಕನ ಚಂದಮುತ್ತನಂತೆ ಕೊಳಲು ಬಾರಿಸುವ ಬಡವ. ಅನಕ್ಷರಸ್ಥನಾದ ಹುಡುಗ, ಶಾಲೆ ಕಲಿಯಲಾಗದ ಈತ ಇತರ ಹುಡುಗರೊಂದಿಗೆ ದನಕಾಯಲು ಕಾಡಿಗೆ ಹೋಗುತ್ತಿದ್ದ. ನೋಡಲು ವಕ್ರನಾಗಿದ್ದ ಹುಡುಗ, ಅಷ್ಟೇ ಮಧುರವಾಗಿ ಕೊಳಲನ್ನು ಬಾರಿಸುತ್ತಿದ್ದ. ಸಾಯಂಕಾಲದ ಹೊತ್ತಿಗೆ ಊರ ಹೊರಗೆ ಯಾವುದೋ ಬಂಡೆಯ ಮೇಲೆ ಕುಳಿತೂ ಆತ ರಾಗಗಳ ಸುಧೆ ಸುರಿಸುತ್ತಿದ್ದರೆ. ಶಾಲೆ ಬಿಟ್ಟಮೇಲೆ ಮನೆಗೆ ಹೋಗದೇ ಎಷ್ಟೋ ಯುವಕರು ಆತನ ಹತ್ತಿರ ಓಡಿ ಹೋಗುತ್ತಿದ್ದರು. ಅವರ ತಂದೆ-ತಾಯಿ ಬಂದು ಆತ ವಕ್ರವಾಗಿದ್ದ ಕೀಳು ಕುಲದವನಾಗಿದ್ದ ಕಾರಣಕ್ಕೆ ಅವನ ಹತ್ತಿರ ಸೇರಬಾರದೆಂದು ಹೇಳಿ (ಬೈದು) ಮನೆಗೆ ಕರೆದು ಬಯ್ಯುವವರೆಗೆ ಅವರಿಗೆ ಸಂಗೀತದ ಲೋಕ ವಾಸ್ತವ ಸಮಾಜವನ್ನು ಮರೆಸಿರುತಿತ್ತು. ಹೀಗೆ ಬೈಯಿಸಿಕೊಂಡ ನಂತರ ಅವರೇನು ಅವನಲ್ಲಿಗೆ / ಕಲ್ಯಾಣಿಯಲ್ಲಿಗೆ ಬರುವುದು ಬಿಡುತ್ತಿರಲಿಲ್ಲ. ಅದಕ್ಕೆ ಕಾರಣ ಕಲ್ಮನಸ್ಸಿನ ಹೃದಯಗಳನ್ನು ತಲೆತೂಗಿಸುವ ಸಂಗೀತ ಅವನದ್ದಾಗಿತ್ತು. ಹೀಗೆ ಇರುವಾಗ ಆ ಊರಿನ ಗೌಡರ ಮಗಳು ಪುಷ್ಪಾ ಆತನ ಸಂಗೀತಕ್ಕೆ ಮನಸೋಲುತ್ತಾಳೆ. ಈಕೆ ವಿದ್ಯಾವಂತೆ, ರೂಪವಂತೆ,

ಗುಣವಂತೆಯಾಗಿದ್ದಳು. ಅವಳ ಸೌಂದರ್ಯ ವರ್ಣಿಸಲ ಅಸಾಧ್ಯವಾಗಿತ್ತು. ಆಕೆಗೆ ಆ ಸಂಗೀತ ಎಷ್ಟರ ಮಟ್ಟಿಗೆ ಆಕರ್ಷಿಸಿತ್ತೆಂದರೆ. ಕಲ್ಯಾಣಿ ದಿನ ಕೊಳಲು ಬಾರಿಸಲಿಲ್ಲವೆಂದರೆ ತನ್ನ ಉಸಿರೇ ನಿಲ್ಲುತ್ತೆ ಏನು ಎನ್ನುವ ಹಾಗೆ ಯೋಚಿಸುತ್ತಿದ್ದಳು. ಹೀಗೆ ದಿನಗಳು ಉರುಳಿದಂತೆ ಆಕೆಗೆ ಆತನಲ್ಲಿ ಪ್ರೇಮ ಹುಟ್ಟುತ್ತದೆ. ಇದು ಗೌಡನಿಗೂ ತಿಳಿಯುವುದು. ಆತ ಕೀಳು ಕುಲದವನು. ಕುರೂಪಿ, ಬಡವ, ಅನಕ್ಷರಸ್ಥನೆಂದು ತಿಳಿದರೂ ಮುದ್ದಿನ ಒಬ್ಬಳೇ ಮಗಳ ಸಂತೋಷ ಈಡೇರಿಸಬೇಕೆಂಬ ಯೋಚನೆಯಿಂದ – ಈಕಡೆ ತನ್ನ ಪ್ರತಿಷ್ಠೆ ಗೌರವ ಉಳಿಸಿಕೊಳ್ಳಬೇಕೆಂಬ ಹಂಬಲದಿಂದ ಇಬ್ಬರನ್ನೂ ಮದುವೆ ಮಾಡುವ ನಾಟಕವಾಡಿ ತನ್ನ ಆಳುಗಳನ್ನು ಬಿಟ್ಟು ಕಲ್ಯಾಣಿಯನ್ನು ಕೊಲೆಮಾಡಿಸಿ ಶವವನ್ನು ಯಾರಿಗೂ ಕಾಣದಂತೆ ಮುಚ್ಚಿಬಿಡುತ್ತಾನೆ. ಪಾಪ ಏನು ಅರಿಯದ ಮುಗ್ದ ಕಲ್ಯಾಣಿ ಮಣ್ಣಿನ ಮರೆಯಾಗುವ ಅಮಾನವೀಯ ದೃಶ್ಯ ಮನಕಲಕುವಂತಹುದು. ಅಲ್ಲದೆ ಕಲ್ಯಾಣಿ ಮತ್ತು ಪುಷ್ಪ ನಡುವಿನ ಪ್ರೇಮ ನಮಗೆ ಜನ್ನನ ಯಶೋದರ ಚ್ಚರಿತೆಯ ಅಮೃತಮತಿ ಮತ್ತು ಅಷ್ಟಾವಕ್ರನನ್ನು ನೆನಪಿಸುತ್ತದೆ. ಈ ಗೌರವ, ಅಂತಸ್ತು, ಪ್ರೇಸ್ಟಿಜ್ಗಳ ಹಿನ್ನಲೆಯಲ್ಲಿ ಹೂಮನಸ್ಸುಗಳು ಹೇಗೆ ಬಾಡಿ ಹೋಗುತ್ತವೆ ಎಂಬುದನ್ನು ನಾಗೇಶ ಹೆಬ್ಬಾಲೆಯವರು ಈ ಕಥೆಯಿಂದ ಬಿಚ್ಚಿಡುತ್ತಾರೆ. ಅವರ ಮೂಲ ಕಥೆ ನೋಡಿದಾಗ ಅವರು ಕಥೆ ಹೇಳುವ ಶೈಲಿಯಿಂದ ಕಥೆ ಇನ್ನಷ್ಟು ಮನಸ್ಸಿನ ಹತ್ತಿರಕ್ಕೆ ಬಂದು ನಿಲ್ಲುತ್ತದೆ.

**ಬಾಡಿಗೆ ದೇವರು:**

ಕಥಾ ಸಂಕಲನದ ಶಿರ್ಷಿಕೆಯಾಗಿರುವ ಈ ಕಥೆ ಯಾವ ರೀತಿಯಾಗಿ ದೇವರು ಸಹ ಇಂದಿನ ಸಮಾಜ, ಸಂದರ್ಭದಲ್ಲಿ ಉಪಯೋಗಿಸಲ್ಪಡುತ್ತಿದ್ದಾನೆ ಎಂಬುದು ತಿಳಿಸುತ್ತದೆ. ದೇವರು ಒಬ್ಬ ನಾಮ ಹಲವು ಎಂದು ಎಲ್ಲರೂ ಪುರಾಣ ಹೇಳುತ್ತಾರೆ. ಆದರೆ ನುಡಿಯಿದ್ದಂತೆ ನಡೆಯಿಲ್ಲ ಅನೇಕ ದೇವಸ್ಥಾನಗಳಲ್ಲಿ ದುಡ್ಡು ಕೊಟ್ಟರೆ ದೇವರ ಪಾದಮುಟ್ಟಿ ನಮಸ್ಕರಿಸಬಹುದು ಆದರೆ ಹಣವಿಲ್ಲದವರಿಗೆ ಗುಡಿಯ ಬಾಗಿಲು ಮುಟ್ಟಿ ನಮಸ್ಕರಿಸುವಷ್ಟು ಅವಕಾಶವಿಲ್ಲ. ಈ ಹಿನ್ನಲೆಯಲ್ಲಿ ಮೂಡಿರುವ ಕಥೆಯು ಸಮಾಜದಲ್ಲಿ ಮೇಲೆ ಜಾತಿ ಮತ್ತು ಕೆಳಜಾತಿಯ ಇಬ್ಬರು ವ್ಯಕ್ತಿಗಳ ಮಧ್ಯ ಉದ್ಭವಿಸಿದ ಮನಸ್ಥಾಪ ದಲಿತರ ಹುಡುಗನನ್ನು ಊರಿನಿಂದ ಬಹಿಷ್ಕಾರ ಹಾಕುವುದರ ಮುಖಾಂತರ ದಲಿತರ ಮತ್ತು ಸವರ್ಣೀಯರ ಮಧ್ಯೆ ಬಾಂಧವ್ಯ ಮುರಿದುಹಾಕುವಲ್ಲಿ ಕಾರಣವಾಗುತ್ತದೆ. ಇಲ್ಲಿಂದಲೇ ಕಥೆ ತನ್ನ ತಿರುವನ್ನು ಪಡೆದು ಸಮಾಜವನ್ನು ಸುವ್ಯವಸ್ಥಿತವಾಗಿ ಕಟ್ಟುವಲ್ಲಿಗೆ ಬಂದು ನಿಲ್ಲುತ್ತದೆ. ಅಂದರೆ ಮನುಷ್ಯ ಒಬ್ಬ ಸಾಮಾಜಿಕ ಪ್ರಾಣಿ ಆತ ಒಂದಲ್ಲ ಒಂದು ರೀತಿಯಲ್ಲಿ ಇನ್ನೊಬ್ಬರನ್ನು ಅವಲಂಬಿಸಲೇ ಬೇಕು. ಹಾಗಾಗಿ ಸವರ್ಣೀಯರು ದೇವರ ಪೂಜಾ. ಸಂದರ್ಭದಲ್ಲಿ, ಜಾತ್ರಾ ಸಂದರ್ಭದಲ್ಲಿ ಬಳಸಿಕೊಳ್ಳುವತೆ ಹೇಳುತ್ತಾನೆ. ದೇವರ

ಬಗ್ಗೆ ಜಾನಪದೀಯರು ಹೆಚ್ಚು ನಂಬಿಕೆ, ಗೌರವ ಹೊಂದಿದ್ದಕ್ಕಾಗಿ ಆತನ ಮಾಲೆಗೆ ಮನ್ನಣೆ ನೀಡಿ ದಲಿತರನ್ನು ತಮ್ಮೊಂದಿಗೆ ಸೇರಿಸಿಕೊಳ್ಳುತ್ತಾರೆ.

ಇಲ್ಲಿ ಶ್ರೀಯುತ ಹೆಬ್ಬಾಲೆಯವರು ಸಾಮಾಜಿಕ, ಧಾರ್ಮಿಕ ಹಾಗೂ ಸಾಂಸ್ಕೃತಿಕ ಕ್ಷೇತ್ರಗಳಲ್ಲಿ ಊರಿನವರೆಲ್ಲ ಜಾತಿ, ಮತ, ಧರ್ಮ, ಮೇಲು – ಕೀಳೆಂಬ ಭಾವನೆಗಳನ್ನು ಬಿಟ್ಟು ಒಗ್ಗಟ್ಟಿನಿಂದ ಸೇರಿ ಮಾಡಬೇಕು. ಎಲ್ಲರೂ ಭಾತೃತ್ವ ಭಾವನೆಯಿಂದ ಬದುಕಬೇಕು. ಇದರಿಂದ ಸಮಾಜದಲ್ಲಿ ಸುಖ, ಶಾಂತಿ ನೆಲೆಸುತ್ತದೆ ಎಂಬ ಆಶಯವನ್ನು ವ್ಯಕ್ತಪಡಿಸಿದ್ದಾರೆ.

ಕರೆ:

ದೂರದ ಊರಿಗೆ ಕೆಲಸ ಕಾರ್ಯಗಳನ್ನು ಹುಡುಕಿಕೊಂಡು ಹೋಗಿದ್ದ ವ್ಯಕ್ತಿಗೆ ತಂದೆಯ ಮರಣ ವಾರ್ತೆಯನ್ನು ಕಳುಹಿಸುವ ವಿಷಯವೇ ಕರೆಯ ಕೇಂದ್ರ ಬಿಂದುವಾಗಿದೆ. ಕರೆಯೆಂದರೆ ಹೇಳಿ ಕಳುಹಿಸು ಅಥವಾ ಯಾವುದೋ ರೀತಿಯಲ್ಲಿ ಸುದ್ದಿ ಮುಟ್ಟಿಸುವುದೆಂದರ್ಥ. ಇಲ್ಲಿಂದಲೇ ಕಥೆ ಪ್ರಾರಂಭವಾಗಿ ಸುದ್ದಿನ ತಿಳಿದ ಮಗನ ಪ್ರತಿಕ್ರಿಯೆ ಯಾವರೀತಿಯಾಗಿರುತ್ತದೆ. ಊರಿಗೆ ಬಂದ ಮೇಲೆ ಆತ ನೆರವೇರಿಸುವ ಶವ ಸಂಸ್ಕಾರ. ಇತರ ವಿಧಿವಿಧಾನಗಳು ಜರುಗಿಸುವ ರೀತಿ ಎಲ್ಲವೂ ಇಲ್ಲಿ ಬಿಡಿ – ಬಿಡಿಯಾಗಿ ಹೇಳಿದ್ದಾರೆ. ಇಲ್ಲಿ ತಂದೆ – ಮಗನ ಮಧ್ಯದ ವಾತ್ಸಲ್ಯ ಬಾಂಧವ್ಯ ಎಷ್ಟು ಶ್ರೇಷ್ಠವಾಗಿರುತ್ತದೆ. ಅಚಿಥವರನ್ನು ಕಳೆದುಕೊಂಡಾಗ ಆಗುವ ವ್ಯಥೆಯನ್ನು ವ್ಯಕ್ತ ಪಡಿಸುವುದರೊಂದೆಂದಿಗೆ. ಮನುಷ ಸತ್ತಾಗಲು ಮಾಡುವಂಥ ವಿಧಿಬದ್ಧ ಆಚರಣೆಗಳನ್ನು ಹೇಳಿದ್ದಾರೆ.

ಜಗತ್ತಿನಲ್ಲಿ ಹುಟ್ಟು ಎಷ್ಟು ಸಹಜವೋ. ಸಾವು ಅಷ್ಟೇ ಸಹಜವಾದದ್ದು. ಎಂಬುದನ್ನು ಹೇಳುತ್ತಾರೆ. ಆ ಸಮಯದಲ್ಲಿನ ದುಃಖದ ವಾತಾವರಣ. ನಂತರ ಕಾಲ ಕಳೆದಂತೆ ಮರೆಯಾಗಿ ಹೋಗುತ್ತದೆ. ಆ ನೆನಪಿಗೆ ಬಂದು ಹೊಸ ಸನ್ನಿವೇಶಗಳು ಸಂತೋಷದ ಸಂದರ್ಭಗಳು ಬಂದು ತುಂಬುತ್ತವೆ. ಇಲೆಲ್ಲಾ ನಿಸರ್ಗದಷ್ಟೇ ಸಹಜವಾಗಿ ವ್ಯಕ್ತಿ ಜೀವನದಲ್ಲಿ ಜರುಗಿ ಹೋಗುತ್ತವೆ ಎನ್ನುವುದು ಈ ಕಥೆ ಬಿಂಬಿಸುತ್ತದೆ.

**ಊರಿಗೆ ಬಂತು ಟೂರಿಂಗ್ ಟಾಕೀಸ್ :**

ಜನಪದರಲ್ಲಿ ಎಲ್ಲವೂ ನಿಸರ್ಗದವಾದ ಅಂಶಗಳೇ ಆಗಿದ್ದವು. ಅಂದರೆ ಅವರು ಬಳಸುವ ಸಾಧನ ಸಲಕರಣೆಗಳು. ಮನೋರಂಜನೆ, ಕೃಷಿ ಪದ್ಧತಿ, ಇತ್ಯಾದಿ. ಮನೋರಂಜನೆಗಾಗಿ ಅವರು ಬಯಲು ನಾಟಕ, ಕಥೆ, ಹಾಡು, ಗೊಂಬೆಯಾಟಗಳು ನಡೆಸುತ್ತಿದ್ದರು. ಆದರೆ ಆಧುನಿಕತೆ ಸೋಂಕು ಇಂದು ಹಳ್ಳಿಗಳಿಗೂ ಬರುತ್ತಿದ್ದಂತೆ ಅವರಲ್ಲಿ ಮೊದ – ಮೊದಲು ಇದ್ದ ಕುತೂಹಲ ವಿಸ್ಮಯ ಈ ಕಥೆ ಬಿಂಬಿಸುತ್ತದೆ.

ಪರದೆ ಚಿತ್ರ / ಟೆಂಟ್ ಸಿನಿಮಾ ಊರಿಗೆ ಬರುತ್ತಿದ್ದಂತೆ ಎಲ್ಲರೂ ಮುಗಿ ಬಿದ್ದು ನೋಡಲು ಹಾತೊರೆಯುವ ರೀತಿ, ಮತ್ತು ಆಧುನಿಕ್ಷತೆಯ ಕರಾಳ ಛಾಯೆ ಹಳ್ಳಿಗಳ ಮೇಲೂ ಬೀಳುತ್ತಿದೆ ಎಂಬೆರಡು ಅಂಶಗಳು ಈ ಒಂದು ಕಥೆಯಲ್ಲಿ ಕಾಣಬಹುದಾಗಿದೆ.

**ಹಂದಿ ಬಡಿಗೆ**

ಬಾಡಿಗೆ ದೇವರು ಕಥಾಸಂಕಲನದಲ್ಲಿ ಒಂದಾಗಿರುವ ಈ ಕಥೇ ಹಂದಿಯನ್ನು ಓಡಿಸಲು ಬಳಸುವ ಸಾಧನವಾಗಿರುವ ಕೋಲು ಅಥವಾ ಬಡಿಗೆಯನ್ನು ಹೇಳುತ್ತದೆ. ಆದರೆ ಇದರ ಹಿನ್ನಲೆಯಾಗಿ ದಕ್ಷಿಣ ಕರ್ನಾಟಕ ಪ್ರದೇಶದಿಂದ ಉತ್ತರ ಕರ್ನಾಟಕದ ಕಡೆಗೆ ವರ್ಗಾವಣೆಯಾಗಿ ಬರುವ ಒಬ್ಬ ಮೇಷ್ಟ್ರು ಪ್ರಾದೇಶಿಕ ಭಾಷೆಯ ವ್ಯತ್ಯಾಸದಿಂದ ಯಾವ ರೀತಿಯಾಗಿ ಸಮಸ್ಯೆಗೆ ಸೊಲುಕಿ ಹಾಕಿಕೊಳ್ಳುತ್ತಾರೆ ಎಂಬುದನ್ನು ಈ ಕಥೆ ಹೇಳುತ್ತದೆ .

ಸಿ) **ಸಮಾಧಿ :**

ಆತ್ಮದಿಂದ ಬೇರೆಯಾಗುವ ದೇಃವನ್ನು ಮಣ್ಣಿನಲ್ಲಿ ಮಚು ಬಿಡುವರು ಹುಟ್ಟುವ ಮುಂಚೆ ಎಲ್ಲಿಯೋ ಮರೆಯಾಗಿರುವ ದೇಹ ಮತ್ತೆ ಭೂಮಿಯೇ ಮೇಲೆ ಬಂದು ಮತ್ತೆ ಎಲ್ಲೋ ಮರೆಯಾಗಿ ಮುಗಿಲ ಮರೆಯ ಬೊಂಬೆಯಾಗುತ್ತಾನೆ. ಹೀಗೆ ಎಲ್ಲಿಂದಲೋ ಬಂದು ಮತ್ತೆ ಮರೆಯಾಗುವ ಮನಸ್ಸು ಭೂಮಿಯ ಮೇಲೆ ವಿಶ್ವಮಾನವನಾಗಿ ಬದುಕುತ್ತಾನೆ ಎಂದು ಕುವೆಂಪುರವರು ಸಾರಿದ ಮಾತು ಮನುಷ್ಯ ಇದ್ದಾಗ ಸುತ್ತ ಸಂಬಂಧಗಳ ಬಂದನ ಸುಖ, ಸಂತೋಷ ಬಯಕೆಗಳ ಇಡೇರಿಕೆ, ಬಯಸಿದಂತಹ ಜೀವನವೆಲ್ಲ ಪಡೆಯಬಹುದೆಂದು ಹೇಳಿದರು ಆದರೆ ಇದೆ ಅಂಶವನ್ನ ವಿಭಿನ್ನ ದೃಷ್ಟಿಕೋನದಿಂದ ಕಾಣ ಹೊರಟ ನಾಗೇಶ ಹೆಬ್ಬಾಲೆಯವರು ವಿಶ್ವ ಮಾನವನಾಗಿ ಎಲ್ಲಿಯೋ ಇದ್ದ ಮನುಷ್ಯ ಭೂಮಿಗೆ ಬಂದು ಅಲ್ಪಮಾನವನಾಗಿ ಬದುಕುತ್ತಾನೆ ಮತ್ತೆ ಆತ ವಿಶ್ವಮಾನವನಾಗಿ ಮುಗಿಲ ಮರೆಯಾಗುತ್ತಾನೆಂದು ಅಭಿವ್ಯಕ್ತಿಸುತ್ತಾರೆ.

ಸಾಹಿತ್ಯ ಕವಿಯ ಪ್ರತಿಭೆ, ಅನುಭವ ಮತ್ತು ಕಲ್ಪನೆಗಳಿಂದ ರಚನೆಯಾಗುತ್ತದೆ ಒಂದು ಅದಕ್ಕೆ ಆತ ಇದ್ದ ವಸ್ತುಗಳನ್ನೆ ಬಳಸಿ ಹೊಸ ಲೋಕವನ್ನೆ ಸೃಷ್ಟಿಸಲಿಲ್ಲವನಾಗಿದ್ದಾನೆ. ಎಲ್ಲರೂ ಸಾಮಾನ್ಯವಾಗಿ ಗಿಡ, ಮರ, ಬೆಟ್ಟಗುಡ್ಡ ಹಗಲು (ಸುರ್ಯೋದಯ)ಗಳು (ಸೂರ್ಯಾಸ್ತ) ಭಾನು, ಭುವಿ, ಪ್ರಾಣಿ, ಪಕ್ಷಿ ನೋಡುತ್ತೇವೆ ಆದರೆ ಕವಿಕಲ್ಪನೆಯಷ್ಟು ಸುಂದರವಾದ ಯೋಚನೆ / ಅಲೋಚನೆ ಎಲ್ಲರಿಗೂ ಎಟಕಲಾರದು ಉದಾ: ದೇವರು ರುಜು ಮಾಡಿದನು ಈ ಒಂದು ಚಿಕ್ಕ ವಾಕ್ಯ ಕೇಳುತ್ತಿದ್ದಂತೆಯೇ ಒಂದು ರೀತಿಯ ಕುತೂಹಲ ಆಸಕ್ತಿ ಮೂಢುತ್ತದೆ. ಅದರಿಲ್ಲ ಕುವೆಂಪು ಕಲ್ಪನೆ ನಾವು ನೋಡುವ ಆಕಾಶದಲ್ಲಿನ ಹಾರಾಡದ ಸುಂದರತೆಯನ್ನು ವಿವರಿಸಿದೆ. ಅನೇಕ ಬಾನಕ್ಕಿಗಳು (ನೀರಕೋಳೀ) (ಬಾತಕೋಳೀ) ನೀಲಿಬಾನಲ್ಲಿ ಸಾಲಾಗಿ ಹಾರಾಡುತ್ತವೆ. ಆಗ ನೋಡುಗರ ಕಣ್ಮನಗಳನ್ನು ಆಕರ್ಷಿಸುತ್ತವೆ. ಆದರೆ ಕವಿಯೊಬ್ಬನ ಕಲ್ಪನೆ ಎಲ್ಲರಿಗೂ ಎಟ್ಟುಕದು ಅದನ್ನವರು ವಿಶಾಲವಾದ ನೀಲಿಬಾನಿನ ಮೇಲೆ ದೇವರು ರುಜು (ಸಹಿ) ಮಾಡಿದನೆಂದು ಬಣಿಸುತ್ತಾರೆ, ನೋಡಿ ಎಲ್ಲೋ ಇರುವ ಕಾಣದಿರುವ ದೇವರು ತನ್ನ ಹಸ್ತಾಕ್ಷರ ಮೂಡಿಸಿರುವನೆಂದು ಹೇಳುವಲ್ಲಿನ ಅವರ ಕಲ್ಪನಾತೀತ ಭಾವನೆ ಎಷ್ಟು ಕೌಶಲ್ಯಮಯವಾಗಿದೆಯೆಂದು ತಿಳಿಯಬಹುದಾಗಿದೆ.

ಒಂದು ಚಿತ್ರಕಲೆ ನೋಡುಗರ ದೃಷ್ಟಿಕೋನದಿಂದ ಭಿನ್ನ-ವಿಭಿನ್ನವಾದ ಅರ್ಥವನ್ನು ಪಡೆದುಕೊಳ್ಳುತ್ತದೆ ಒಂದು ಚಲನ ಚಿತ್ರ ಅವರವರಗೆ ಮನಸ್ಸಿನಾಧಾರವಾಗಿ ಅರ್ಥಹಿಸಿಕೊಳ್ಳುತ್ತಾರೆ. ಅದೇ ರೀತಿ ಮಾನವನ ಈ ಬದುಕು, ಸಮಾಜದಲ್ಲಿ ಸಂಕುಚಿತವಾಗಿದೆಯೋ ವಿಶಾಲವಾಗಿ ಸಾಗಿದೆಯೋ ಅದು ಬಾವಿಯ ಕಪ್ಪೆಯಂತೆಯೋ ಬಾನಿನ ಹಕ್ಕಿಯಂತೆಯೋ ಎಂಬುದನ್ನು ಅವರವರ ನೋಡುವ ಹಿನ್ನಲೆಯ ಮೇಲೆ ಅಡಗಿದೆ ಎಂಬುದನ್ನ ನನಗೆ ಹೆಬ್ಬಾಲೆಯವರೆ ಹೇಳಿಕೊಟ್ಟ ಅಂಶವಾಗಿದೆ. ನಾನು

ಅವರ ಸಂದರ್ಶನಕ್ಕೆ ಹೋದಾಗ ಅವರ ಮುದ್ರಣ ಹಂತದ ಕೃತಿಗಳಲ್ಲಿ ಒಂದಾದ 'ಸಮಾಧಿ' ಕೃತಿ ಬಗ್ಗೆ ವಿವರಿಸುತ್ತಿರಬೇಕಾದರೆ, ಕುವೆಂಪುರವರು ಮನುಷ್ಯ ಸಮಾಜದಲ್ಲಿ ವಿಶ್ವಮಾನವನಾಗುತ್ತಾನೆಂದು ಹೇಳಿದ್ದಾರೆ ಆದರೆ ನಾನು ಎಂದಾಗ ಮನುಷ್ಯ ಅಲ್ಪ ಮಾನವನಾಗುತ್ತಾನೆ (ಹುಟ್ಟಿದ ಸಂದರ್ಭದಲ್ಲಿ ಆತ ನೂರು ವರ್ಷ ಆಯುಷ್ಯ ಪಡೆದು ಬದುಕುವ ದಿನ ದಿನವು ಅವನ ಆಯಸ್ಸು ಕಡಿಮೆಯಾಗಿ ಅಲ್ಪ ಮಾನವನಾಗುತ್ತಾನೆಂದು ನಾನು ಉತ್ತರಿಸಿದೆ ಅಥವಾ ನನ್ನ ಅಭಿಪ್ರಾಯ ಅವರ ಮುಂದಿಟ್ಟೆ ಆಗ ಅವರು ನಿನ್ನ ಉತ್ತರ ಸರಿ ಅದು ನಿನ್ನ ದೃಷ್ಟಿಕೋನದಲ್ಲಿ ಕಲ್ಪಿಸಿಕೊಂಡದ್ದು ಆದರೆ ಅದೇ ಜೀವನವನ್ನು ನಾನು ಈ ರೀತಿ ಅಭಿಪ್ರಾಯಿಸುತ್ತೇನೆ ಎಂದು ವಿಷಯದ ಸ್ಪಷ್ಟನೆ ನೀಡಿ ಕೊನೆಗೆ ನೀವು ನನ್ನ ಅಭಿಪ್ರಾಯವನ್ನೆ ಒಪ್ಪಬೇಕಾಗಿಲ್ಲ ಆದರದೂ ಎಷ್ಟರ ಮಟ್ಟಿಗೆ ಸರಿ–ತಪ್ಪು ಎಂಬುದನ್ನು ಆಲೋಚಿಸಿ ಎಂದರು. ಹೀಗೆ ವಿನಮ್ರತೆಯಿಂದ ನುಡಿವ ಅವರ ಈ ಸಹೃದಯರ ಮಡಿಲಿಗೆ ಬರಲು ಸಿದ್ಧವಾಗಿದೆ.

ಸಮಾಧಿಯಲ್ಲಿ ಮನುಷ್ಯನ ಹುಟ್ಟು –ಸಾವಿನ ಮಧ್ಯದ ಬದುಕಿನಲ್ಲಿ ತನ್ನ ಸುತ್ತಲ ಸಮಾಜದಲ್ಲಿ ಏನೆಲ್ಲ ನಿರ್ಮಿಸಿಕೊಂಡಿದ್ದಾನೆ ಅವುಗಳೇ ಆತನಿಗೆ ಹೇಗೆ ಬೆಲಿಯಾಗಿ ಸುತ್ತಿವೆ ಎಂಬುದನ್ನು ವಿವರಿಸಿದ್ದಾರೆ. ಮನುಷ್ಯ ತನಗಾಗಿ ತನ್ನ ಸುವ್ಯವಸ್ಥಿತ ಜೀವನಕ್ಕಾಗಿ ಸಮಾಜವನ್ನು ನಿರ್ಮಿಸಿಕೊಂಡ. ಆದರೆ ಸಮಾಜಕ್ಕಾಗಿ ತನ್ನ ಬದುಕನ್ನ ಸವೆಸುತ್ತಿದ್ದಾನೆ. ಸಮಾಜದಲ್ಲಿ ತಮ್ಮ ತಮ್ಮ ಹೊಟ್ಟೆ ಪಾಡಿಗಾಗಿ ಕೆಲಸಗಳನ್ನು ಎಲ್ಲರೂ ನಿರ್ವಹಿಸುತ್ತಿದ್ದರು. ಯಾವ ಯಾವ ಕೆಲಸಗಳಲ್ಲಿ ಎಷ್ಟೇಷ್ಟು ಶ್ರಮವಿದೆ. ಆ ಕಾರ್ಯಗಳನ್ನು ನೆರವೇರಿಸಲು ಯಾರಲ್ಲಿ ಸಾಮರ್ಥ್ಯವಿದೆಯೋ ಆ ಸಾಮರ್ಥ್ಯ–ಕ್ಕನುಗುಣವಾಗಿ ಶ್ರಮವಿಭಜನೆಗಳಾದವು ಹಿರಿಯರು ಕಿರಿಯರೆನ್ನುವ ಭಕ್ತಿಭಾವಗಳು ಸಮಾಜದಲ್ಲಿ ಶಾಂತಿ–ಸುವ್ಯವಸ್ಥೆ ಬಾಳುವಂತೆ ಮಾಡಲು ಹುಟ್ಟಿಕೊಂಡವು ಅದರ ಜೊತೆಗೆ ದ್ವೇಷ ಅಸೂಯೇ, ದರ್ಪ ಅಹಂಕಾರ ಪ್ರತಿಷ್ಠೆಗಳು ಬೆಳೆದಂತೆ ಕಸುಬುಗಳು ಬೆಳೆದವು ಅವು ಮುಂದೆ ಕುಲಗಳಾದವು ಕುಲ–ಜಾತಿಯಾಗಿ ನಿರ್ಮಾಣವಾಯಿತು. ಮಗುವೊಂದು ಹುಟ್ಟಿದಾಗ ನಾನು ಇಂಥ ಜಾತಿಯ, ಲಿಂಗದ, ಬಣ್ಣದ ಭಾಷೆಯ ವರ್ಗದ, ಸಾಮರ್ಥ್ಯದ ಹಾಗೂ ಇಂಥ ವ್ಯಕ್ತಿತ್ವದ ವ್ಯಕ್ತಿಯೆಂದು ಅರಿತಿರಲಾರದು ಅದು ನಾವೆಲ್ಲರೂ ಬದುಕುವ ಸಮಾಜಕ್ಕಿಂತ ವಿಭಿನ್ನವಾದ ಹೊಸ ಲೊಕವನ್ನೆ ತನಗಾಗಿ ನಿರ್ಮಿಸಿಕೊಂಡು ತಾನು ನಕ್ಕ ಇತರರನ್ನು ನಗಿಸುತ್ತಾ ಯಾವುದೇ ಚಿಂತೆಯಿಲ್ಲದೆ, ಯೋಚನೆಯಿಲ್ಲದೆ ಎಲ್ಲರನ್ನು ಪ್ರೀತಿಸುತ್ತದೆ. ಎಲ್ಲರಿಂದ ಪ್ರೀತಿಪಡೆಯುತ್ತದೆ. ಯಾರ ಭಾಷೆಗೂ ಸ್ಪಂದಿಸುತ್ತದೆ ಎಲ್ಲರ ಭಾಷೆಯನ್ನು ಆಡುತ್ತದೆ. (ಮಗುವಿನ ಭಾಷೆ ಎಲ್ಲರಿಗೂ ಅರ್ಥವಾಗುತ್ತದೆ) ಎಲ್ಲವನ್ನು ಕಲಿಯುತ್ತದೆ, ಆದರೆ ಅದು ಯಾವಾಗ ತಾಯಿ ಮಡಿಲು ಅಥವಾ ತೊಟ್ಟಿಲು ಬಿಟ್ಟು ಸಮಾಜಕ್ಕೆ ಕಾಲಿಡುತ್ತದೆಯೋ ಆವಾಗ ಸಮಾಜದ ಅಥವಾ ಪ್ರಪಂಚದ ಒಂದೆರಡು ಭಾಷೆ ಮಾತ್ರ ತನ್ನ ಅಭಿವ್ಯಕ್ತಿಗಾಗಿ ಆರಿಸಿಕೊಳ್ಳುತ್ತದೆ. ಮತ್ತು ಕೇವಲ ಒಂದೆರೆಡು ಭಾಷಿಕ ಜನರಿಗೆ ಮಾತ್ರ ಸ್ಪಂದಿಸುವುದು ಶಾಲೆಯಲ್ಲಿ ಒಂದು ಆಯ್ದ

ವಿಷಯದ ಬಗ್ಗೆ ಜ್ಞಾನಪಡೆಯಬೇಕು, ಸಮವಸ್ತ್ರವನ್ನು ಧರಿಸಬೇಕು ಅಲ್ಲಿ ಎಲ್ಲಾ ರೀತಿಯ ಬಟ್ಟೆಗಳನ್ನು ಧರಿಸಲಿಕ್ಕಾಗದು, ಕೆಲವೊಂದು ಸ್ಥಳಗಳು ಲಿಂಗ ಮತ್ತು ಜಾತಿ ಭೇದದ ಆಧಾರದ ಮೇಲೆ ನಿಷೇಧವಾಗುತ್ತವೆ, [ಉದಾ: ಮಸೀದಿಯಲ್ಲಿ ಹೆಣ್ಣು ಮಗು ಸಹ ಹೋಗಬಹುದು ಆದರೆ ಹುಡುಗಿ ಅಥವಾ ಹೆಣ್ಣು ಪ್ರವೇಶಿಸಲಾಗದು, ದೇವಸ್ಥಾನದಲ್ಲಿ ಮೇಲ್‌ವರ್ಗದ ಹಿಂದುಗಳಿಗೆ ಮಾತ್ರ ಪ್ರವೇಶ ಆದರೆ ಚಿಕ್ಕದಾದ ಮುಸ್ಲಿಂ ಮಗುವಿಗೆ ನಾವೂ ವಿಭೂತಿ ಹಚ್ಚಿ ದೇವಸ್ಥಾನಕ್ಕೆ ಒಯ್ಯುತ್ತಿದ್ದೇವು ಆದರೆ ಈಗ ಆತನೇ ಬರಲಿಕ್ಕೆ ಒಪ್ಪುತ್ತಿಲ್ಲ ಕಾರಣ ಆತ ಸಮಾಜದ ನಿಯಮಾವಳಿಯನ್ನ ಅರಿತಿದ್ದಾನೆ.

ಎಲ್ಲರೊಂದಿಗೂ ಬೇರೆಯುವ ಹಾಗಿಲ್ಲಾ ಎಲ್ಲ ಭಾಷೆಗಳನ್ನಾಡಲು ಆಗುವುದಿಲ್ಲ ಎಲ್ಲ ಕ್ಷೇತ್ರಗಳಲಿ ಪ್ರವೇಶಿಸುವಂತಿಲ್ಲ, ಎಲ್ಲವನ್ನು ಪಡೆಯಲು ಆಗುವುದಿಲ್ಲ ಯಾವುದೇ ಉದ್ಯೋಗಗಳು ಎಲ್ಲರೂ ನಿರ್ವಹಿಸುವಂತಿಲ್ಲ (ಮೀಸಲಾತಿ)

ಹೀಗೆ ಮನುಷ್ಯ ಸಮಾಜದಿಂದ ತನ್ನ ತಾನೇ ಹಲವು ಬೇಲಿಗಳನ್ನು ತನ್ನ ಸುತ್ತ ಕಟ್ಟಿಕೊಂಡು ವಿಶಾಲ ಪ್ರಪಂಚವನ್ನು ಜಾತಿ, ಲಿಂಗ, ಪ್ರತಿಷ್ಠೆ, ವರ್ಗ, ವರ್ಣಗಳ ಹಿನ್ನಲೆಯಿಂದ ಸಂಕುಚಿತ ಮಾಡಿಕೊಂಡು ಆ ಗೂಡಿನಲ್ಲಿಯೇ ಬದುಕುತ್ತಾನೆ ಅದರಾಚೆಗೆ ಇರುವ ಸಮಾಜ ತನ್ನದಲ್ಲವೆನ್ನುವಂತೆ ಕಾಣುತ್ತಾನೆ. ಹೇಗೆ ಬಾವಿಯಲ್ಲಿನ ಕಪ್ಪೆ ಬಾವಿಯೇ ಒಂದು ಲೋಕವೆಂದು ಭ್ರಮಿಸಿ ಬದುಕುತ್ತದೆ. ಅದಕ್ಕೆ ಬಾವಿಯಿಂದ ಹೊರ ತೆಗೆದಾಗಲೆ ತಿಳಿಯುವುದು ಪ್ರಪಂಚವೆಂಬುದು ತಾನು ಊಹಿಸಲಾರದಷ್ಟು ವಿಶಾಲವೆಂದು ಅರ್ಥವಾಗುವುದು, ಹಾಗೇ ಮನುಷ್ಯ ನಾನು ಎಲ್ಲವನ್ನು ತಿಳಿದುಕೊಂಡಿದ್ದೇನೆ. ನನಗೆಲ್ಲ ಸುಖ ಸಂತೋಷಗಳು ದೊರೆತವು ಎಂದುಕೊಂಡಿದ್ದಾನೆ. ಅದಕ್ಕೆ ಕೆಲ ಜ್ಞಾನಿಗಳು ಹೇಳುತ್ತಾರೆ ಪ್ರಪಂಚ ಹೆಚ್ಚು ವಿಶಾಲವಾದದ್ದು ಕಲಿತಷ್ಟು ಜೀವನ ಪೂರ್ತಿ ಕಲಿಯುತ್ತಲೆ ಇರುವ ಪುಸ್ತಕವಾಗಿದೆ. "ಎಲ್ಲ ಬಲ್ಲವರಿಲ್ಲ" ಎಂದ ಮಾತು "ನಾವು ತಿಳಿದದ್ದು, ಅರಿತ್ತು ಸಾಸಿವೆ ಕಾಳಿನಷ್ಟು ಮಾತ್ರ ತಿಳಿಯಬೇಕಾದದ್ದು ಬೆಟ್ಟದಷ್ಟು ಮಾತ್ರ ಎನ್ನವಂಥ ನುಡಿ ನಾವು ಒಂದು ಜನ್ಮ ಪೂರ್ತಿಯಾಗಿಯೂ ಅನುಭವಿಸಲು ಕಲಿಯಲು ಆಗದು ಎಂಬ ಮಾತನ್ನ ಸ್ಪಷ್ಟಪಡಿಸುತ್ತದೆ.

ಹೀಗೆ ವಿಶಾಲವಾದ ಜೀವನದಲ್ಲಿ ವ್ಯಕ್ತಿ ತಾನು ತನ್ನ ಕುಟುಂಬ ತನ್ನ ಊರು ತನ್ನ ಬಂಧು-ಬಳಗ-ಆಪ್ತರಿಂದ ಕಟ್ಟಿಕೊಂಡ ಒಂದು ಸಮಾಜದಲ್ಲಿ ಒಂದು ಚಿಕ್ಕ ಗೂಡು ಕಟ್ಟಿಕೊಂಡು ಬದುಕುತ್ತಾನೆ ಹೊರತು ವಿಶಾಲವಾದ ತೆರೆದ ಸಮುದ್ರದಂತಿರುವ ಸಮಾಜದಲ್ಲಿ ಎಲ್ಲರೊಂದಿಗೂ ಎಲ್ಲವನ್ನು ಅನುಭವಿಸಿ ಬಾಳಲಾರನೆಂಬ ಅಭಿಪ್ರಾಯವನ್ನೆ ನಾಗೇಶರವರು ತಿಳಿಸುತ್ತಾ ಮತ್ತೆ ಆತ ಯಾವುದೇ ಭೇದವಿಲ್ಲದ ವಿಶಾಲ ಜೀವನಕ್ಕೆ ಪಾದಾರ್ಪಣೆ ಮಾಡುವುದು ಮಣ್ಣಿಗೆ ಸೇರುವ ದೇಹದಿಂದ ಬೇರ್ಪಟ್ಟಾಗ ಮಾತ್ರ ವಿಶ್ವ ಮಾನವನ್ನಾಗಿದ್ದ ಮನುಷ್ಯ ಸಮಾಜಕ್ಕೆ ಅಥವಾ ಜೀವನದಲ್ಲಿ

ಕಾಲಿಟ್ಟಾಗ ಅಲ್ಪಮಾನವನಾಗಿ ಸಂಸರಿಸಿ ಮತ್ತೆ ಬಂದ ದಾರಿಗೆ ಬಂದಂತೆ ಹಿಂತಿರುಗುತ್ತಾನೆಂದು ಹೇಳುತ್ತಾರೆ.

ನಾಗೇಶ ಹೆಬ್ಬಾಲೆಯವರ ಈ ಮಾತು ಕುವೆಂಪುರವರ ಮಾತಿಗೆ ವಿರುದ್ಧವಾದುದ್ದೇನಲ್ಲ ಕೇವಲ ಸಾಮಾಜಿಕ ಮಾನವನ ಜೀವನ ನೋಡುವ ಭಿನ್ನ-ಭಿನ್ನ ದೃಷ್ಟಿಕೋನದ ವಿಭಿನ್ನ ಮನೋಭಾವವುಳ್ಳ ಕವಿಗಳ ಅಭಿಪ್ರಾಯಗಳು ಇವು ಆಗಿದ್ದು ಕವಿಯೊಬ್ಬನ ಭಾವನೆಗಳು ಯಾವ ಯಾವ ಹಿನ್ನಲೆಯಲ್ಲಿ ಯೋಚಿಸುತ್ತವೆ ಎಂಬುದೇ ಅವರ ಸುತ್ತಲಿನ ವಾತಾವರಣದಿಂದ ಅವರು ಪಡೆದುಕೊಂಡು ಅನುಭವಗಳು ಅವು ಅವರ ಮನಸ್ಸಿನ ಮೇಲೆ ಬೀರಿದ ಪರಿಣಾಮಗಳು ಪ್ರೇಕರವಾಗಿ ಪೂರಕವಾಗಿ ನಿಲ್ಲುತ್ತವೆ. ಇದಕ್ಕೆ ಅಂದಂದಿನ ಸನ್ನಿವೇಶ ಸಂದರ್ಭಗಳು ಕಾರಣವಾಗುತ್ತವೆ. ಇಂದಿನ ಜಾಗತೀಕರಣ ಸಂದರ್ಭದಲ್ಲಿ ಈ ಎಲ್ಲ ಬೇಲಿಗಳಿಂದ ಮುಕ್ತಿ ಸಿಕ್ಕಿದರೆ ಅಲ್ಲಿ ಈ ಅಭಿಪ್ರಾಯ ಮತ್ತೆ ಬೇರೆ ರೀತಿಯಲ್ಲಿ ಸ್ಪಷ್ಟಪಡಿಸಬಹುದು ಆದರೆ ಹೆಬ್ಬಾಲೆಯವರ ದೃಷ್ಟಿಕೊನದಲ್ಲಿ ಹಿಂದಿನಿಂದಲೂ ಇದು ಪರಂಪರಾಗತವಾಗಿ ನಡೆದು ಬಂದಿದೆ. ಮುಂದೆಯೂ ಸಾಗುತ್ತದೆ. ಆದರೆ ಈ ತಾರತಮ್ಯಗಳಲ್ಲಿ ಬದಲಾವಣೆ ಬಂದು ಅವುಗಳು ತಮ್ಮ ಸ್ವರೂಪ ಬದಲಾಯಿಸಿಕೊಂಡಿವೆ. ಮನುಷ್ಯ ಎಲ್ಲಿಯವರೆಗೆ ತನ್ನ ಸ್ವಾರ್ಥ ಅಸೂಯೆ, ದರ್ಪ, ಅಹಂಕಾರ, ಮನೋಭಾವಗಳು ತೊರೆಯುವುದಿಲ್ಲವೋ ಅಲ್ಲಿಯವರೆಗೆ ಜೀನವ ವಿಶಾಲವಾಗಲು ಸಾಧ್ಯವಿಲ್ಲ ಆತ ಸಮಾಜಿಕ ಜೀವನದಲ್ಲಿ ವಿಶ್ವಮಾನವನಾಗಲು ಸಾಧ್ಯವಿಲ್ಲವೆಂದಿದ್ದಾರೆ.

ಈಗಲೂ ನಾವು ಎಷ್ಟೋ ಶಿಕ್ಷಿತರಾದರು ನಾಗರೀಕರಾದರೂ ಆಧುನಿಕ ಸೊಗೆನಲ್ಲಿ ಬದುಕುತ್ತಿದ್ದರು ಸಹ ನಾವು ವಿಶ್ವವ್ಯಾಪಿಯಾಗಿ ಬಾಳಲು ಸಾಧ್ಯವಿಲ್ಲ ಎಲ್ಲರನ್ನು ಪ್ರೀತಿಸುವಲ್ಲಿ ಯಾರಾದರೂ ಒಬ್ಬರೂ ದ್ವೇಷಕ್ಕೆ ಒಳಗಾಗುತ್ತಾರೆ. ಶತ್ರುಗಳಾಗಿರುತ್ತಾರೆ. ಎಲ್ಲೆಡೆ ಸಂಚರಿಸುವ ಸ್ವಾತಂತ್ರ್ಯವಿದ್ದರೂ ಎಲ್ಲೋ ಒಂದೆಡೆ No Entry ಇರುತ್ತೆ. ಎಲ್ಲಾ ಪದವಿ ಪಡೆದರೂ ಯಾವುದೋ ವಿಷಯ ಜ್ಞಾನ ಇರುವುದಿಲ್ಲ ವಾಕ್ ಸ್ವಾತಂತ್ರ್ಯವಿದ್ದರೂ ಅನ್ನಸಿದ್ದನ್ನು ನಿರಾಂತಕವಾಗಿ ಹೇಳಲು ಹಿಂಜರಿಯಬೇಕಾಗುತ್ತದೆ. ಇದನ್ನೆ ನಾವು ಅಲ್ಪಜೀವನ ಎನ್ನಬಹುದು ಇಂದಿನ ಪಟ್ಟಣದಲ್ಲಿ ಯಾಕೆ ಹಳ್ಳಿಗಳಲ್ಲೆ Concrete ಗೋಡೆಗಳು ಮಾತ್ರ ಸುತ್ತ ಕಟ್ಟಿಕೊಂಡಿಲ್ಲ ತಮ್ಮ ಜೀವನಕ್ಕೆ ಕಟ್ಟಿಕೊಂಡು ಕಪ್ಪೆಗಳಂತೆ ತಮ್ಮದೇ ಆದ ಜೀವನ ಕ್ಷೇತ್ರದಲ್ಲಿ ಬದುಕುತ್ತಿದ್ದಾರೆ.

## ಡಿ) ಅಂಬಲಿ (ಕಾದಂಬರಿ)

ಹೆಬ್ಬಾಲೆಯವರ ಜೀವನ ಚರಿತ್ರೆಯನ್ನೊಳಗೊಂಡ ಈ ಕೃತಿ ಬೂದಿ ಮುಚ್ಚಿದ ಕೆಂಡದಂತಿರುವ ಪ್ರತಿಭೆಗಳಿಗೆಲ್ಲ ಒಂದು ದಾರಿದೀಪವಾಗಲಿದೆ. ಇತಿಹಾಸದ ಪುಟ ಸೇರಿದ ಮಹಾನ ವ್ಯಕ್ತಿ ಅಂಬೇಡ್ಕರರವರ ಜೀವನವನ್ನೆ ನಾವೆಲ್ಲ ಅಭ್ಯಸಿಸುತ್ತಲೆ ಬಂದಿದ್ದೇವೆ. ದಲಿತರಾಗಿ ಹುಟ್ಟಿದರು ಎನ್ನುವ ಕಾರಣಕ್ಕಾಗಿಯೂ ಸಮಾಜ ಅವರನ್ನ ಎಷ್ಟರ ಮಟ್ಟಿಗೆ ಪರೀಕ್ಷೆಗೆ ಗುರಿಮಾಡಿತೆಂದರೆ ಬೇರೆಯಾರೇ ಆದರೂ ಅದರಲ್ಲ ಸೋತು ಸೋತು ಸಮಾಜದಲ್ಲಿ ಹೋತು ಹೋಗುತ್ತಿದ್ದರು ಆದರೆ ಅವರು ಎಲ್ಲಾ ಸಮಸ್ಯೆಗಳನ್ನ ದಿಟ್ಟವಾಗಿ ಎದುರಿಸಿ ನಿಂತು ಸಮಾಜದ ಜನರ ಜೀವನಕ್ಕೆ ಒಂದು ತತ್ವ ರೂಪಿಸಿಕೊಟ್ಟು ಅವರೆಲ್ಲರ ಮನ್ನಣೆಗೆ ಪಾತ್ರರಾದರು. ಇದೇ ರೀತಿಯಾದ ಪರೀಕ್ಷೆಗೊಳಪಟ್ಟ ಪುಟದು ಬಂದ ಬಂಗಾರದ ಪ್ರತಿಭೆಯ ಹೆಬ್ಬಾಲೆ ನಾಗೇಶರವರು ನಮ್ಮ ಜಾತಿ ವ್ಯವಸ್ಥೆಯೆಂಬ ಕರಾಳ ಕೂಪದಲ್ಲಿ ದಲಿತರೆಂದು ಹೆಸರು ಪಡೆದದ್ದರಿಂದಲೇ ಸಾಮಾಜಿಕ ಜೀವನದಲ್ಲಿ ಸಾಗಿ ಬರುವ ದಾರಿಯಲ್ಲಾ ಮುಳ್ಳಿನ ಹಾಸಿಗೆಯೇ ಕಂಡರು ಆದರೂ ಛಲ ಬಿಡದೇ ಮುನ್ನುಗಿ ನಡೆದು ಗುರಿ ಮುಟ್ಟಿದರು. ಶೋಷಣೆಗೆ ಒಳಪಡಿಸಿದ ಅದೇ ಜನ ಇಂದು ನಿಬ್ಬೆರಗಾಗುವಂತೆ ಸಮಾಜದಲ್ಲೊಂದು ಉನ್ನತ ಸ್ಥಾನ ಪಡಿದುಕೊಂಡಿದಾರೆ. ಇಂಥ ವ್ಯಕ್ತಿಯ ಜೀವನದ ಪ್ರತಿ ಹಂತಗಳನ್ನು ದಾಟಿ ಬರುವಲ್ಲಿ ಅವರಿಗೆ ಎದುರಾದ ಸಮಸ್ಯೆಗಳಾವವೇ ಇರಲಿ ಅವುಗಳನ್ನು ಎದುರಿಸುವಲ್ಲಿ ಅವರಿಗಿದ್ದ ಸಹನೆ ಛಲ ತಂತ್ರ ಬುದ್ದಿ ಶಕ್ತಿ ಹಾಗೂ ಆತ್ಮ ವಿಶ್ವಾಸ ಎಂತಹದು ಎಂಬುದರ ಬಗ್ಗೆ ಅರಿತುಕೊಂಡು ನಮ್ಮಲ್ಲಿಯ ಸುಪ್ತ ಪ್ರಜ್ಞೆಯಾ ಜಾಗೃತವಾಗಿ ನಾವು ನಮ್ಮದೇ ಆದ ಆಥವಾ ನಮಗಿಷ್ಟವಾದ ನೀತಿಯನ್ನು ಪಡೆಯಬಹುದು ಎಂಬ ಉದ್ದೇಶದಿಂದಲೇ ಅವರ ಈ ಚರಿತ್ರೆ ಅಭ್ಯಸಿಸುವ ಅಗತ್ಯ ನಮ್ಮೆಲ್ಲರಿಗೂ ಇದೆ.

ಸಾಮಾಜಿಕ ಪ್ರಾಣಿ ಆತ ಯಾವಾಗಲೂ ಇತರರನ್ನೆ ನೋಡಿ ಮನುಷ್ಯ ಒಬ್ಬ ಬದುಕುತ್ತಿರುತ್ತಾನೆ. ತನಗಿಂತ ಮೇಲೆ ಹಂತದಲ್ಲದ್ದವರನ್ನ ಕಂಡು ಕೆಲವರು ಅಸೂಯೆ ಪಟ್ಟುಕೊಳ್ಳುತ್ತಾರೆ. ಇನ್ನು ಕೆಲವರು ತಮಗೆ ಆ ದೇವರು ಅಂಥ ಬದುಕು ನೀಡಲಲ್ಲವಲ್ಲ ಎಂದು ಮರುಗುತ್ತಾರೆ, ತನಗಿಂತ ಕೆಳ ಮಟ್ಟದಲ್ಲದ್ದವರನ್ನ ಕಂಡು ಅಸಹ್ಯ ಪಡುವವರು ಹಲವರಿದ್ದರೇ ಅವರಿಗಿಂತಲೂ ಆ ದೇವರು ನಮಗೆ ಸುವ್ಯವಸ್ಥಿತವಾದ ಬಾಳನ್ನು ನೀಡಿದಾನಲ್ಲವೆಂದು ಸಂತೃಪ್ತಿ ಪಡುವವರು ಇದ್ದಾರೆ. ಆದರೆ ಸತತ ಪ್ರಯತ್ನ ಪರಿಶ್ರಮಗಳಿಂದ ಶುದ್ಧ ಮನಸ್ಸಿನಿಂದ ಒಳ್ಳೆಯ ಜೀವನ ನಮ್ಮದಾಗಿಸಿಕೊಳ್ಳಬೇಕೆಂಬುವವರಿಗೆ ಅಥವಾ ಈ ರೀತಿಯ ಒಂದು ತಾವು ತಲುಪಬೇಕೆಂಬ ಆಸಕ್ತಿ ಉದ್ದೇಶ ಇರುವವರಿಗೆ ಬದುಕೊಂದು ಕೃಷ್ಣನ ಭಗವದ್ಗೀತೆಯಾಗಲಿದೆ ಕಣ್ಣ ಮರೆ ಇರುವಂತಹವರನ್ನು ಗುರುವಾಗಿ ಹುಡುಕುವುದಕ್ಕಿಂತ ನಮ್ಮ ಕಣ್ಣೆದುರಿಗೆ ಹೆಜ್ಜೆ ಹಾಕುತ್ತಿರುವ ವ್ಯಕ್ತಿಯನ್ನ ಕಂಡು ಕಲಿಯಬೇಕು ಇಂದು

ಹಳ್ಳಿಗಳಲ್ಲಿ ಅನೇಕ ಪ್ರತಿಭಗಳಿವೆ ಆದರೆ ಅವು ಯಾವುದೇ ಘೋಷಣೆ ಇಲ್ಲದೆ ಬೆಳವಣಿಗೆಯಿಲ್ಲದೆ ಅಲ್ಲಯೇ ಬಾಡಿ ಬಸವಳಿಯುತ್ತಿವೆ. ಇನ್ನ ನಾಗರಿಕ ಸಂಪರ್ಕವಿಲ್ಲದ ಭಾರತೀಯರ ತವರೂರುಗಳೇ ಆಗಿರುವ ನಮ್ಮ ಹಳ್ಳಿಗಳಲ್ಲಿ ಎಷ್ಟೋಂದು ವೈಭವಯುತವಾದ ಸಂಸ್ಕೃತಿಯ ಸಂಪತ್ತು ಇದೆ ಮತ್ತು ಅಲ್ಲಿನ ನಿಸರ್ಗ ರಮಣೀಯತೆಯ ಕಣ್ಮನಗಳು ಸೆಳೆಯುವಂತಹದು ಎಂಬುದು ನಮಗೆ ಗೊತ್ತು ಆದರೆ ಅಲ್ಲಿಯ ಎಲೆಮರೆಯ ಕಾಯಿಗಳಂತಿರುವ ಜಾತಿವ್ಯವಸ್ಥೆಯಿಂದಾಗಿ ಅಲ್ಲಿನ ಜನ ಎಷ್ಟೊಂದು ಮಾನಸಿಕ ಹಿಂಸೆ ಅನುಭವಿಸುತ್ತಿದ್ದಾರೆಂಬದು ಅಂಬಲಿಯಲ್ಲಿ ಕಾಣಬಹುದಾಗಿವೆ.

"ಉಳಿ ಪೆಟ್ಟು ಬೀಳುವ ಕಲ್ಲೆ ಶಿಲೆಯಾಗಿ ನಿಲ್ಲುವದು" ಎನ್ನುವಂಚಿತೆ ಅವರ ' ಬದುಕು ಎಂಬುದು ಇಲ್ಲಿ ತಿಳಿಯಬಹುದು.

ಸದಾ ಮುಗುಳ್ನಗುವ ಎಲ್ಲರೊಂದಿಗೆ ಸ್ನೇಹದಿಂದ ವರ್ತಿಸುವ ಅವರು ತಾನೊಬ್ಬ ಸಮಸ್ಯೆಯ ಸಾಗರದ ಸುಳಿಯ್ನಿಂದ ಬದುಕಿ ಬಂದೆ ಎಂಬ ವಿಷಯದಲ್ಲಿ ಮಾತ್ರ ತೃಪ್ತರಾಗಿಲ್ಲ ಅವರು ಎಲ್ಲರ ಒಳತನ್ನೆ ಬಯಸುವದರಿಂದ ಸಮಾಜದಲ್ಲಿ ಸಮಾನತೆಯನ್ನು ನಿಜವಾದ ಸ್ವಾತಂತ್ಯವನ್ನು ತರುವ ಹೋರಾಟದಲ್ಲಿ ಅರಳವ್ವನ ಲೇಖನದಿಂದ ಕೊಂಚ ಮಟ್ಟಿನ ಸಂತೃಪ್ತಿಯನ್ನು ಹೊಂದಿದ್ದಾರೆ. ಸಮಾಜದಲ್ಲಿನ ಅಶಾಂತಿ ಅಸೂಯೆ ಅಸಮಾನತೆಗಳಿಗೆಲ್ಲ ಕಾರಣ ಜನರಲ್ಲಿ ಅಡಗಿರುವ ಭೇದ ಭಾವ ತಾರತಮ್ಯಗಳ ಮೌಢ್ಯತೆ ಎಂಬುದು ಅವರ ಆಲೋಚನೆ ಈ ಅನಿಸಿಕೆ ಅವರದು ಮಾತ್ರವೆಲ್ಲ ದೇವವಾಣಿ ಜನವಾಣಿ ಮಟ್ಟಕಿಳಿಯದಿದ್ದಾಗ. ಜನವಾಣಿಯನ್ನೆ ದೇವವಾಣಿ ಮಟ್ಟಕ್ಕೇರಿಸಿದ ಶಿವಶರಣರದು "ಕಾಸಿ ಕಮ್ಮಾರನಾದ ಬೀಸಿ ಮಾರಯ್ಯನಾದ ವೇದವನ್ನೋದಿ ಹಾರುವವನಾದ " ಬಸವಣ್ಣ

ಕಸುಬುಗಳ ಆಧಾರದ ಮೇಲೆ ಕಟ್ಟಿಕೊಂಡ ನಮ್ಮ ಜಾತಿಸ್ತರಗಳು ಜನರ ವ್ಯಕ್ತಿತ್ವವನ್ನೆ ನಾಶಮಾಡುತ್ತಿವೆ ಎನ್ನುವುದನ್ನೆ ವಚನಗಳಲ್ಲಿ ಪ್ರತಿಬಿಂಬಿಸಿದರು ಮೌಢತೆಯಿಂದ ಹೊರತರಲು ಎಲ್ಲ ಜನರನ್ನು ಮೇಲು ಕೀಳನ್ನೆದೆ ಅನುಭವ ಮಂಟಪದಲ್ಲಿ ಎಲ್ಲರಿಗೂ ಪ್ರವೇಶ ನೀಡಿದರು ಎಲ್ಲ ಸಹೋದರತ್ವ ಭಾವನೆಯಿಂದ ಒಬ್ಬರ ಮನೆಯಲ್ಲಿ ಇನೊಬ್ಬರ ಆತಿಥ್ಯ ಸ್ವೀಕರಿಸುವುದು. ಅರ್ಜಿಜಾತಿ ಇವಾಹಗಳು ನೆರವೇರಿಸುವುದು ಮಾಡಿದರು ಮುಂದೆ ಬಂದ ಹರಿದಾಸರು ಹಾಡಿನ ಮುಖಾಂತರವಾಗಿ ಜನರಲ್ಲಿ ಸಮಾನತೆ ತರಲು ಯತ್ನಿಸಿದರು ಜಾತಿ ಎಂಬ ಸಂಕೊಲೆಯಲ್ಲಿ ಸಿಲುಕಿ ನೆರಳುತ್ತಿದ್ದ ಸಮಾಜವನ್ನ ಬಿಡುಗಡೆಮಾಡಲು ಸಮಾಜ ಸುಧಾರಾಣೆ ಮಾಡಲು ತರಲು ಯತ್ನಿಸಿದರು.

“ಕುಲ ಕುಲ ಕುಲವೆಂದು ಹೊಡೆದಾಡುವಿರೇಕೆ

ನಿಮ್ಮ ಕುಲದ ನೆಲೆಯನ್ನೇನಾರ ಬಲ್ಲಿರಾ” ಕನಕದಾಸ

ಜಾಗತೀಕರಣದಿಂದಲೂ ಜಾತಿ ವ್ಯವಸ್ಥೆ ಕಮರಿ ಹೋಗುತಿತು ಎಂದು ಕಂಡರು ಎಷ್ಟೋ ಸಮಾಜ ಸುಧಾರಕರು, ಮಹಾತ್ಮರು ಯೋಗಿಗಳು ಬಂದು ಹೋದರು ಮೇಲು ಕೀಳೆಂಬ ಭಾವನೆ ಸಮಾಜದಿಂದ ನಶಿಸಿ ಹೋಗದೆ ಅದಕ್ಕಂಟಿದ ಸೊಂಕಾಗಿ ತನ್ನ ರೂಪ ಮಾತ್ರ ಬದಲಿಸಿಕೊಳ್ಳುತ್ತದೆ. ಅಂದು ಬ್ರಾಹ್ಮಣ, ಕ್ಷತ್ರೀಯ, ಶೋದ್ರ ವೈಶ್ಯರೆಂಬ ವರ್ಗ ಸಂಘರ್ಷಗಳು ಸಮಾಜದಲ್ಲಿದ್ದರೆ. ಇಂದು ಶ್ರೀಮಂತ, ಬಡವ, ಅಧಿಕಾರ ಪ್ರತಿಷ್ಠೆಗಳೆಂಬ ವರ್ಗಗಳಲ್ಲಿ ತಾರತಮ್ಯಗಳು ನಡೆಯುತ್ತಲೆ ಇವೆ ಎಂಬ ವಿಷಾದವನ್ನು ಬಿತ್ತರಿಸಲಿಕ್ಕಾಗಿ ತಮ್ಮ ಚ್ಚರಿತ್ರೆಯನ್ನು ಒಂದಲ್ಲ ಒಂದು ರೀತಿಯಲ್ಲ ಒಂದು ವರ್ಗದ ಜನರಿಂದ ಇನೊಂದು ವರ್ಗದ ಜನ ತುಳಿತಕ್ಕೆ ಒಳಗಾಗುತ್ತಿದ್ದಾರೆ..

ತಮ್ಮ ಜೀವನ ಚರಿತ್ರೆ ಬರೆದಿದ್ದಾರೆಯೇ ವಿನಾಃ ತಮ್ಮ ಬಗ್ಗೆ ಹೊಗಳಿಕೊಳ್ಳುವುದಕ್ಕಾಗಿಯಲ್ಲ ಯಾಕೆಂದರೆ ಅವರು ಶಿವಶರಣರ ಅಥವಾ ವಚನಕಾರರ, ತತ್ವಪದಕಾರರ, ಕುವೆಂಪು, ದ.ರಾ.ಬೇಂದ್ರೇಯವರ ಸಾಹಿತ್ಯದಿಂದ ತುಂಬಾ ಪ್ರಭಾವಿತರಾದವರು ಆದರಿಂದಲೇ ಏನೋ ಬಸವಣ್ಣನವರು ಹೇಳಿದ ಸೂತ್ರದಂತೆ ತನ್ನ ಬಣ್ಣಿಸಬೇಡ ಇದಿರ ಹಳಿಯಲುಬೇಡ ಎನ್ನುವಂತಹವರು ನಾನು ನಾನು ಎನ್ನುವುದು ಅಹಂಭಾವ ಅಹಂಭಾವ ಇರಕೂಡುದು ಅಲ್ಲದೇ ಹೇಳಿ ಹೇಳಿ ಮಾಡುವುದಕ್ಕಿಂತ ಕೆಲಸ ಮಾಡಿತೋರಿಸಬೇಕೆಂಬುದು ಅವರ ಸಿದ್ಧಾಂತ ಈ theory ಪಾಲನೆಯಿಂದ ಎಷ್ಟೋ ಸಾರಿ ಈ ಎಲ್ಲಾ ಕೃತಿ ರಚನೆಗಳು ಮಾಡಿದ ಕವಿ ಎವರೇ ಎಂದು ಎಷ್ಟೋ ಜನ ಗುರುತಿಸಲು ಹಿಂಜರಿದಿದ್ದರು, ಇಲ್ಲಿ ಮೂರ್ತಿ ಚಿಕ್ಕದಾದರು ಕೀರ್ತಿ ದೊಡ್ಡದು ಎನ್ನುವಂತೆ ಅವರ ವ್ಯಕ್ತಯೆಂಬ ಮೂರ್ತಿಯಲ್ಲಿ ವಿಶಿಷ್ಟವಾದ ವ್ಯಕ್ತಿತ್ವ ಹೊರಹೊಮ್ಮಲು ಸುತ್ತಲಿನ ವಾತಾವರಣದಿಂದ ಅವರು ಕಂಡುಂಡ ಅನುಭವಗಳು ಅವರು ಬದುಕಿನ ಘಟನೆಗಳೆ ಹಿನ್ನಲೆಯಾಗಿ ಸ್ಫೂರ್ತಿಯಾಗಿ ಬಂದಿವೆ.

ಸಮಾಜದಲ್ಲಿ ಯಾವ ರೀತಿಯಾಗಿ ವ್ಯಕ್ತಿ ವ್ಯಕ್ತಿಯಿಂದಲೇ ಹಿಂಸೆಗೆ ಶೋಷಣಗೆ ಒಳಗಾಗುತ್ತಾನೆ. ಇದನ್ನು ತಡೆಗಟ್ಟುವಲ್ಲಿ ನಮ್ಮೆಲ್ಲರಲ್ಲಿ ಬೆಳೆಯ - ಬೇಕಾದ ಮಾನವೀಚು ಮೌಲ್ಯಗಳ ಅಗತ್ಯತೆ ಶೋಷಣಗೆ ಒಳಗಾಗುವವರು ಪ್ರತಿಭಟಿಸಿಬೇಕಾದ ಅವಶ್ಯಕತೆ ಈ ಎಲ್ಲವು ಶ್ರೀಯುತರ ಬದುಕಿನ ಒಳನೋಟವನ್ನು ಹೊಂದಿದ ಅಂಬಲಿಯಿಂದ ಸಹೃದಯನಿಗೆ ತಿಳಿಸಿ ಸಮಾಜದಲ್ಲಿ ಕೊಂಚಮಟ್ಟಿನದಾದರೂ ಶಾಂತಿ, ಸಮಾನತೆ ತರಲು ಯತ್ನಿಸಿದ್ದಾರೆ. ಬಹುಬೇಗ ಅವರ ಈ ಆಸೆಯ ಬುತ್ತಿ ಸಹೃದಯನ ಕೈ ಸೇರಲಿದೆ.

**ಹಲಕಟ್ಟ ಸಿದ್ದನ ಅವಾಂತರಗಳು**

ಸೃಜನಶೀಲರಾಗಿ ಸಾಹಿತ್ಯ ಕ್ಷೇತ್ರದಲ್ಲಿ ಗುರುತಿಸಿಕೊಂಡಿರುವ ಹೆಬ್ಬಾಲೆಯವರು ತಮ್ಮ ಸುತ್ತಲಿನ ಸಮಾಜದಲ್ಲಿ ಬದುಕುವ ಜನವರ್ಗದ ಶ್ರಮ ಅವರ ಸತ್ಯ ನಿಷ್ಠೆ , ಆಚಾರ, ವಿಚಾರ , ಸಂಪ್ರದಾಯ, ಕಸುಬುಗಳು ಬಡತನ ಅವರ ಒಳ್ಳೆ ಹಾಗೂ ಕೆಟ್ಟ ನಡುವಳಿಕೆಗಳನ್ನು ಯಥಾ ರೀತಿಯಾಗಿ ಬಿಚ್ಚಿಟ್ಟಿದ್ದಾರೆ ಅವರ ಈ ಕೃತಿಯಲ್ಲಿ ಕೇಂದ್ರ ಬಿಂದುವಾದ ಕಥಾನಾಯಕನಾದ ಸಿದ್ದಾ ಎನ್ನುವನು ಈ ಊರಿನಲ್ಲಿ ಪೋಲಿ ಹುಡುಗನೆಚಿದೆ ಹೆಸರು ಪಡೆದವರು. ದಿನ ಒಂದಿಲ್ಲ ಒಂದು ಆವಾಂತರಗಳನ್ನು ಸೃಷ್ಠಿಸುವನಾಗಿದ್ದ ಎಂಬುದನ್ನು ಹಾಸ್ಯವಾಗಿ ಇಲ್ಲಿ ನಾಗೇಶರವರು ವಿವರಿಸಿದ್ದಾರೆ.

# ಅಧ್ಯಾಯ-5

## ಸಮಾರೋಪ

ಜಾನಪದ ಸೊಗಡಿನಲ್ಲಿ ಇರುವ ಸಾಹಿತ್ಯದ ಮೌಲ್ಯಗಳು ಅಂದು-ಇಂದು ಹಾಗೂ ಮುಂದಿನ ಸನ್ನಿವೇಶಗಳಿಗೂ ಅನ್ವಯಿಸುವಂತಹವುಗಳಾಗಿದ್ದು, ನಮ್ಮ ಮಣ್ಣಿನಲ್ಲಿ ಹೊಳೆಹೊಳೆಯುತ್ತಿರುವ ವಜ್ರವೆ ಸರಿ ಅಂತಹ ಅಂಶಗಳು ಕಾಲ ಗರ್ಭದಲ್ಲಿ ಹೂತು ಹೋಗದಂತೆ ಅವುಗಳನ್ನ ಎಲ್ಲೆಡೆಯಿಂದ ಹೊತ್ತು ತಂದು ಸಂಗ್ರಹಿಸಿ ಸಂಪಾದಿಸಿ ಇಡುವ ಕಾರ್ಯಗಳು ಭರದಿಂದ ನಡೆದವು ಇತ್ತೀಚಿನ ದಿನಗಳಲ್ಲಿ ಜನಪದ ಕಲೆ, ಭಾಷೆ, ಜೀವನ, ಆರ್ಥಿಕ ಸ್ಥಿತಿ-ಗತಿ, ಸಾಮಾಜಿಕ ಪರಿಸ್ಥಿತಿ ರಾಜಕೀಯ ಅಂಶಗಳನ್ನು ಇಂದಿನ ಜಾಗತೀಕರಣದ ಸಂದರ್ಭದಲ್ಲಿ ಇರಿಸಿ ಆ ಮೌಲ್ಯಗಳು ಇಲ್ಲಿಯೂ ಬಳಸಿಕೊಳ್ಳಬೇಕು. ಕೆಲವೊಂದು ಸನ್ನಿವೇಶಗಳು ಶೋಚನೀಯವಾಗಿದ್ದು, ಅವುಗಳ ಈಗಲೂ ಬದಲಾದ ರೂಪದಿಂದ ಜರುಗುತ್ತಲೆ ಇವೆ ಎನ್ನುವ ಇಂಥ ಹಲವು ಅಂಶಗಳು ಸಾಹಿತ್ಯದಲ್ಲಿ ಹಿಡಿದಿಡುವ ಕಾರ್ಯದಲ್ಲಿ ತಮ್ಮನ್ನು ತೊಡಗಿಸಿಕೊಂಡ ಕವಿಗಳಲ್ಲಿ ಒಬ್ಬರಾಗಿರುವ ಡಾ॥ ಹೆಬ್ಬಾಲೆ ಕೆ. ನಾಗೇಶರವರ ಬದುಕು-ಬರಹವನ್ನೊಳಗೊಂಡ ಈ ಕೃತಿ ಅವರೆಲ್ಲ ಸಾಹಿತ್ಯಕ ಸಾಮಾಜಿಕ ಕೃತಿಗಳ ಮೇಲೆ ಬೆಳಕು ಚೆಲ್ಲಿರುವುದು.

ಹಿಂದುಳಿದ ಪ್ರದೇಶದಿಂದ ಅರಳಿ ಬಂದ ಪ್ರತಿಭೆಯೊಂದು ವಿವಿಧ ಕ್ಷೇತ್ರಗಳಲ್ಲಿ ಗುರುತಿಸಿಕೊಂಡು ಸಾಹಿತ್ಯ ಲೋಕದಲ್ಲಿ ತಮ್ಮ ಸಂಪೂರ್ಣ ವ್ಯಕ್ತಿತ್ವ ನೆಲೆ ನಿಲ್ಲಿಸಿದವರು ಇತ್ತಿಚೆಗಷ್ಟೆ (1995)ರಿಂದ ಬರಹಕ್ಕೆ ಕೈ ಹಾಕಿ ಕಣ್ಣ ಮುಚ್ಚಿ ತೆಗೆಯುವಷ್ಟರಲ್ಲಿ ಅತ್ಯದ್ಭುತ ಸೇವೆಯನ್ನು ಸಲ್ಲಿಸಿದ್ದಾರೆ.

1995 ರಲ್ಲಿ ಮೊದಲ ಬಾರಿಗೆ "ಕೊಡಗಿನ ಸಂಸ್ಕೃತಿ ಬಗ್ಗೆ" ಸಂಶೋಧನಾ ಲೇಖನವೊಂದನ್ನು ಶಕ್ತಿ ದಿನಪತ್ರಿಕೆಯಲ್ಲಿ ನೀಡಿದ್ದರು ಮುಂದೆ ಕೊಡಗಿನ ಸುತ್ತಲಿನ ಮಲೆನಾಡ ನಿಸರ್ಗವನ್ನ ಬಿಂಬಿಸುವ ಇನ್ನೊಂದು ಲೇಖನವನ್ನು 'ಕನ್ನಡ ಪ್ರಭ ದಿನಪತ್ರಿಕೆಗೆ' 1996 (ಎಲ್ಲಿ ಭೂರಮೆ ದೇವೆ ಸನ್ನಿಧಿ ಬಯಸಿ ಬಿಮ್ಮನೆ ಬಂದಳೋ) ಮಂಡಿಸಿದರು ಕೊಡಗಿನ ಸಾಂಸ್ಕೃತಿಕ ಪದಗಳ ಬಗ್ಗೆ ವಿಶ್ಲೇಷಣೆಯನ್ನು ಕಾವೇರಿಯ ಬಣ್ಣನೆ ಮತ್ತು ಅವಳ ಸ್ತ್ರೀ ಸ್ಮೃತಿ ಕೊಡಗಿನ ಮದುವೆಗಳು ದೈವಗಳು, ಸಂಪ್ರದಾಯಗಳನ್ನೆಲ್ಲ ಸವಿವರವಾಗಿ ಲೇಖನಗಳಲ್ಲಿ ಗ್ರಂಥಗಳಲ್ಲಿ ಹಿಡಿದಿಡುತ್ತಾ ಅಲ್ಲಿನ ಜನರ ಬದುಕನ್ನ ಬಹಿರಂಗ ಪಡಿಸಿದ್ದಾರೆ. ಬುಡಕಟ್ಟುಗಳಂತೆ ಕೃಷಿ ಭೂಮಿಗಳೆಲ್ಲ ಬದುಕುವ ಜನರ ವೈಶಿಷ್ಟ್ಯತೆಗಳನ್ನು ವಿವರಿಸಿದ್ದಾರೆ. ಇವರ ಕೊಡವರ ಮದುವೆ ಕಾವೇರಿ ಜಾನಪದ ಈ ಹಿನ್ನಲೆಗೆ ಒಳಗಾಗಿದೆ.

ಕರಾಳ ರಾತ್ರಿ ಮತ್ತು ಅರಳವ್ವ ಕಾದಂಬರಿಗಳು "ಬಿಂಬದೊಳಗಣ ಪ್ರಾಣ" ಕೃತಿಗಳು ಅವರ ದಲಿತರ ಪರವಾದ ಮೌನವಾದ ಹೋರಾಟವಾಗಿದೆ ಅಲ್ಲಿನ

ಜೀವನವನ್ನು ಎಳೆಎಳೆಯಾಗಿ ಬಿಚ್ಚಿಡುತ್ತಾ ಆ ಬಗ್ಗೆ ಅನುಕಂಪವನ್ನ ತೋರುತ್ತಾರೆ. ಇವುಗಳಲ್ಲಿ ಅವರಿಗೆ ಬಲು ಮಹತ್ವಕಾಂಕ್ಷೆಯುಳ್ಳ ಕೃತಿ 'ಅರಳವ್ವ' ಕಾದಂಬರಿ ಇದು ಅವರ ಮನದಾಳದ ಮಾತಿನಿಂದ, ನೈಜತೆಯ ಪ್ರತೀಕತೆಯಿಂದ ಪ್ರಾದೇಶಿಕ ಭಾಷೆಯಲ್ಲಿ ಸಮ್ಮಿಳಿತಗೊಂಡ ಇದು ದಲಿತ ಬಂಡಾಯ ಘಟ್ಟದ ಮನೋಧರ್ಮವನ್ನು ಮಡಿಲಲ್ಲಿ ಹೊತ್ತು ತಂದಿದೆ ಎನ್ನುವ ಕಾರಣಕ್ಕೆ ಹಲವರ ಪ್ರಶಂಸೆಗೆ ಕಾರಣವಾಗಿದೆ, ಕವಿಗಳ ಕನಸಿನ ಕೂಸಾಗಿರುವ ಇದು ಕವಿಗಳ ಭವಿಷ್ಯದ ತಳಪಾಯವೂ ಆಗಿದೆ.

ಡಿ. ಈರೇಶ ನಗರ್ಲೆ :- ಹೇಳುವಂತೆ ಅರಳವ್ವ ನಂತಹ ಒಂದು ವಿಶಿಷ್ಟ ಕಥಾನಾತ್ಮಕ ಕಾದಂಬರಿ ಮೂಲಕ ಅಪರಿಚಿತ ದಲಿತ ಸಮುದಾಯಗಳು ಸಾಂಸ್ಕೃತಿಕ ಅನೋನ್ಯತೆಯನ್ನು ತೋರಿಸಿದ್ದಾರೆ, ಅವರು ವಿಶಿಷ್ಟ ಚೌಕಟ್ಟಿನ ನಿರ್ಭಂಧಕ್ಕೊಳಗಾಗದೆ ಭಾಷೆಯನ್ನು ಸ್ಥಳೀಯ ಗ್ರಾಮ್ಯವಾಗಿ ಬಳಸಿದ್ದಾರೆ, "ಆದರೆ ಕೃತಿಯಲ್ಲಿ ಯಾವುದೇ ಮೂಲಭೂತ ಬದಲಾವಣೆಗೆ ಅಪೇಕ್ಷೆಪಟ್ಟಂತೆ ಕಾಣುವುದಿಲ್ಲ".

ದಲಿತ ಸಾಹಿತ್ಯವೆಂದರೆ ದೇವನೂರು ಮಹಾದೇವ ಹಾಗೂ ಸಿದ್ದಲಿಂಗಯ್ಯಾನೇ ಎಂಬ ಮಾತನ್ನು ಡಾ॥ ನಾಗೇಶ ಹೆಬ್ಬಾಲೆಯಂತಹ ಯುವ ಲೇಖಕರು ಮುಂದಿನ ದಿನಗಳಲ್ಲಿ ಸುಳ್ಳಾಗಿಸುವ ಭರವಸೆಯ ಹಾದಿಯಲ್ಲಿ ಸಾಗಿದ್ದಾರೆಂಬುದು ಅಲೆಶಯೋಕ್ತಿಯೆನಲ್ಲ" ಎಂದಿದ್ದಾರೆ.

ಇನ್ನು ಅವರ ಕಾವೇರಿ ಜಾನಪದ ಕರ್ಣಾಟಕದ ಜೀವನದಿ ಯಾವುದೇ ಭೇದವಿಲ್ಲದೆ ತಮಿಳು ನೆಲದಿಂದ ಮೈತ್ರಿ ಪಡೆದು ಎಲ್ಲೆಲ್ಲಿ ಹೇಗೆಗೆ ಹರಿಯುತ್ತಾಳೆ, ಅವಳಿಂದ ಇನ್ನಷ್ಟು ರಮಣೀಯವಾದ ನಿಸರ್ಗ, ರೈತರ ಬೆನ್ನೆಲುಬಾಗಿ ವಿವಾದಕ್ಕೆ ಕಾರಣವಾಗಿ, ಆಧುನಿಕ ಜಗತ್ತಿಗೆ ಬೆಳಕಾಗಿ (ವಿದ್ಯುತ್ ಉತ್ಪಾದನೆ) ನಿಂತಿದ್ದಾಳೆ ಅವಳ ಹಿನ್ನಲೆಯಲ್ಲಿ ಒಂದು ಸಂಪ್ರದಾಯ ಸಂಸ್ಕೃತಿಯೇ ತಲೆಯೆತ್ತಿ ನಿಂತಿದೆ ಎನ್ನುವುದು ಸವಿವರವಾಗಿ ಶಬ್ದ ಚಿತ್ರ ಬಿಡಿಸಿಟ್ಟಿದ್ದಾರೆ.

ಜನಪದದ ಒಟ್ಟು ಆಯಾಮವನ್ನು ಒಳಗೊಂಡ ಈ ಜನಪದ ಜೀವನದ ಅವಿಭಾಜ್ಯ ಅಂಗವಾಗಿರುವ ಜಾತ್ರೆಗಳು ಏನೆಲ್ಲ ರೀತಿಯಲ್ಲಿ ಉಪಯೋಗವಾಗಿದ್ದವು. ಅವುಗಳ ಹಿಂದಿನ ವೈಶಿಷ್ಟ್ಯವೇನು ? ಅವುಗಳಲ್ಲಿ ಬದಲಾವಣೆ ಯಾವ ರೀತಿಯಾಗಿ ನಡೆಯುತ್ತಿವೆ, ಎನ್ನುವುದನ್ನು ಜಾನಪದ ಬನಸಿರಿಯಲ್ಲಿ ಚರ್ಚಿಸುತ್ತಾರೆ. ಸಂಸ್ಕೃತಿಯನ್ನುವುದು ನಿಂತ ನೀರಲ್ಲ ಅದು ಕಾಲ ಪ್ರದೇಶಗಳು ಬದಲಾದಂತೆ ಬೇರೆ ಬೇರೆ ರೂಪವನ್ನು ಪಡೆಯುತ್ತಾ ಹೋಗುತ್ತದೆ. ಆದರೆ ಅದು ನಶಿಸಿ ಹೋಯಿತು ಎಂದರ್ಥವಲ್ಲ ಅದು ಸರಳವಾಗಿ ನಮ್ಮ ಗ್ರಹಿಕೆಗೆ ಬರುವುದಿಲ್ಲವಷ್ಟೆ ಅದು "ಹಳ್ಳದ ದಂಡ್ಯಾಗಿರೋ ಕರಿಕೆಯ ಕುಡಿಹಂಗ", ಚಿಗುರುತ್ತಲೆ ಇರುವಂತಹುದು, ಅದಕ್ಕಾಗಿ ಅಂದಿನಿಂದ ನಡೆದು ಬಂದು ಆಚಾರ ವಿಚಾರ, ನಂಬಿಕೆ, ಸಂಪ್ರದಾಯಗಳು ಇಂದು ಸಹ ಇವೆ ಅಂದಿಗೂ-ಇಂದಿಗೂ ಕೆಲವು ವ್ಯತ್ಯಾಸಗಳು ಮಾತ್ರ ಕಂಡು ಬರುತ್ತವೆ. ಅದು

ನೀರಿನಂತೆ, ನೀರು ಯಾವುದೇ ವಸ್ತುವಿನಲ್ಲಿ ಹಿಡಿದಿಟ್ಟಿದರು ಅದು ಅದರ ಆಕಾರವನ್ನೆ ಹೊಂದುತ್ತದೆ. "ತಂಬಿಗೆಗೆ ತುಂಬಿದರೆ ತಂಬಿಗೆ ಆಕಾರ, ಮಡಿಕೆಗೆ ತುಂಬಿದರೆ ಮಡಿಕೆ ಆಕಾರ ಇನ್ನು ಬಾವಿ ಮತ್ತು ಹಳ್ಳ ನದಿಗಳ ಆಕಾರವು ಪಡೆಯುತ್ತದೆ. ಅಂದರೆ ಅದಕ್ಕೆ ತನ್ನದೇ ಆದ ಆಕಾರವಿಲ್ಲ. ಹಾಗೇ ಸಂಸ್ಕೃತಿಗೆ ಯಾವುದೇ ರೂಪವಿಲ್ಲ "ಅದು ಎತ್ತಿದವರ ಕೂಸಾಗಿ ಬೆಳೆಯುತ್ತದೆ" ಅದಕ್ಕಾಗಿ ಪೋಷಿಸಿದಲ್ಲಿ ಹುಲುಸಾಗಿ, ಸೊಗಸಾಗಿ ವೃದ್ಧಿಯಾದರೆ ಪೋಷಣೆ ಇಲದಿದ್ದಲ್ಲಿ ಶುಷ್ಕವಾಗಿ ಬೆಳೆದು ಕಡಿಮೆ ಫಸಲು ಕಾಣಸಿಗುತ್ತದೆ ಎಂಬುದನ್ನು ಜಾತ್ರೆಗಳ ಆಚರಣೆ ಹಿನ್ನಲೆಯಲ್ಲಿ ಹೇಳಿದ್ದಾರೆ.

ಬಾಡಿಗೆ ದೇವರು ಕಥಾ ಸಂಕಲನ ಅಂಬಲಿ ಬತ್ತಲೆ ಕತೆಯಾದವರು ಮಂಟೇಸ್ವಾಮಿ ಮತ್ತು ದಲಿತರು ಈ ಕೃತಿಗಳಲ್ಲಿ ಸಮಾಜದಲ್ಲಿನ ಜನರು ರಕ್ತ ಮೌಂಸದ ಹಂದರದೊಳಗೆ ಅಸೂಯೆ ದ್ವೇಷ, ಸ್ವಾರ್ಥ ಮನೋಭಾವಗಳನ್ನು ತುಂಬಿ ಕೊಂಡಿರುವುದರಿಂದ ಕೆಲವರು ಅನ್ನ (ಸಂಪತ್ತು) ಎಂದರೆ ಕಸದಂತೆ ತಿಳಿಯುವಾಗ, ಇನ್ನು ಹಲವರು ಅನ್ನವನ್ನ ಕಸದಂತೆ ಆಯ್ದು ರಸವನ್ನು ಸವಿಯುವವರು ಇದ್ದಾರೆ. ಈ ರೀತಿಯಾಗಿ ಸಮಾಜದಲ್ಲಿ ಪ್ರೀತಿ ಪ್ರೇಮ ವಾತ್ಸಲ್ಯಗಳಿಗೆ ಬೆಲೆಯಿಲ್ಲದಂತಾಗಿ ಎಲ್ಲೆಲ್ಲೂ ಪ್ರತಿಷ್ಠೆ ಅಹಂಕಾರ ಅಸಮಾನತೆಗಳು ತಾಂಡವಾಡುತ್ತಿದ್ದು ಕಾಡುಪ್ರಾಣಿಗಳಂತೆ ಒಬ್ಬರನೊಬ್ಬರು ಅಸಹಕಾರ ದಿಂದಲೇ ಬಾಳ್ವೆ ನಡೆಸುತ್ತಿದ್ದಾರೆಂಬ ಅಂಶವನ್ನು ಸಮಾಜದಲ್ಲಿನ ಜನರ ಮಾನವೀಯ ಮೌಲ್ಯಗಳನ್ನು ಬಡಿದೆಬ್ಬಿಸಲು ಉಪಯೋಗಿಸಿ ಕೊಂಡಿದ್ದಾರೆ. ಅಂದರೆ ಒಟ್ಟಾರೆಯಾಗಿ ಅವರು ಸಾಹಿತ್ಯದಲ್ಲಿ ಕೃಷಿ ಮಾಡಿ 10–14 ವರ್ಷಗಳಲ್ಲಿ ಫಸಲು ತೆಗದು ಕಾದಂಬರಿ ಕವನ, ಕಥೆ, ಪ್ರಬಂಧ, ಸಂಶೋಧನೆ, ಸಂಪಾದನೆ ಇತ್ಯಾದಿ ಬೆಳೆಗಳಲ್ಲಿ ಪ್ರಮುಖವಾಗಿ ಅವರ ಒಲವೆಲ್ಲವೂ ಸಮಾಜದಲ್ಲಿ ಇಲ್ಲದವರ (ಬಡವರ, ಕೆಳವರ್ಗದವರ) ಪರವಾಗಿ ಹೋರಾಡುವುದೇ ಆಗಿದೆ. ಈ ನಿರ್ಧಾರ ಅವರ ಗ್ರಂಥದಲ್ಲಿ ಮಾತ್ರ ಸೇರಿಕೊಂಡಿಲ್ಲ ಅವರ ನಡೆ–ನುಡಿಗಳಲ್ಲೂ ತುಂಬಿದೆ ಎನ್ನುವುದು ಅವರೊಂದಿಗೆ ಚರ್ಚೆಯಲ್ಲಿ ತೊಡಗಿದಾಗಲೆಲ್ಲ ನನ್ನ ಅನುಭವಕ್ಕೆ ಬಂದಂತಹುದು. ಹಿಂದೆ ಶೋಷಣೆ ಮಾಡುವ ವರ್ಗ ಪುರೋಹಿತ ಮತ್ತು ಕ್ಷತ್ರೀಯರಾದರೆ ನಂತರ ಗೌಡ್ರು ಪಟೇಲರುಗಳು ಆ ಗುಂಪಿಗೆ ಸೇರಿದರು, ಈ ಪರಂಪರೆ ವರ್ಗ ವ್ಯವಸ್ಥೆ ವರ್ಣ ವ್ಯವಸ್ಥೆಗಳಲ್ಲಿದ್ದು ಪ್ರಜಾಪ್ರಭುತ್ವದ ಸಂದರ್ಭದಲ್ಲಿ ಅಧಿಕಾರಿಗಳು ರಾಜಕಾರಣಿಗಳು ಆ ಕಕ್ಷೆಯಲ್ಲಿ / ಪಥದಲ್ಲಿ ನಡೆಯುತ್ತಿದ್ದಾರೆ. ಯಾರು ಜನರನ್ನು ಉದ್ಧಾರ ಮಾಡುತಿವಿ ಎನ್ನುತ್ತಾರೋ ಅವರೇ ಅವರನ್ನ ಪಾತಾಳಕ್ಕೆ ತಳುತ್ತಿದ್ದಾರೆ ಅವರಿಂದ ಈಗಲು ಎಷ್ಟೋ ಜನ ಪರಂಪರಾಗತವಾದ ಪ್ರಪಾತದಲ್ಲಿಯೇ ಇದ್ದಾರೆ ಎಂಬ ವಿಷಯ ಅವರು ಸೂಕ್ತವಾಗಿ ತಿಳಿಸಿದಾಗಲೇ ನನಗವರ ಕೃತಿಗಳ ಮೂಲ ಆಶ್ರಯ ಹೊಳೆದದ್ದು.

ಎಷ್ಟೋ ಕೃತಿಗಳು ನಮ್ಮ ಸಾಹಿತ್ಯ ಲೋಕದಲ್ಲಿ ಮಿನುಗುತ್ತಿವೆ. ಅದರಲ್ಲಿ ಕೆಲವು ಕೃತಿಗಳು ಕೃತೃವಿನ ಬದುಕಿನಿಂದ ಬಹು ದೂರದಲ್ಲಿ ನಿಂತಿವೆ. ಎತ್ತಣ ಮಾಮರ ಎತ್ತಣ ಕೋಗಿಲೆ ಎಂಬಂತೆ ಅವರು ಸಂಪತ್ತಿನ ವೈಭವದ ಬಗ್ಗೆ ಬರೆದರೆ ಅವರ ನಿತ್ಯ ಬದುಕಿನಲ್ಲಿ ಅದು ಮರಿಚಿಕೆಯಾಗಿ ಇರುತ್ತವೆ. ಆದರೆ ಹೆಬ್ಬಾಲೆಯವರು ದೂರದ ಬೆಟ್ಟ ನುಣ್ಣಗೆ ಎನ್ನುವಂತೆ ಯಾವೊತ್ತು ಯೋಚಿಸಿದಿಲ್ಲ. ಅವರು ಚಿಕ್ಕಂದಿನಿಂದಲೇ ಸಾಹಿತ್ಯ ಸವಿಯನ್ನು ಸವಿಯುತ್ತಾ ಬಂದವರು ಅದು ಅವರಿಗೆ ಈ ಕ್ಷೇತ್ರದಲ್ಲಿ ತೊಡಗಿಸಿ ಕೊಳ್ಳುವಂತೆ ಮಾಡಿರಬಹುದು ಇಲ್ಲವೆಂದೇನಲ್ಲ. ಆದರೆ ಇವರು ಡಾ॥ ಸಿದ್ದಲಿಂಗಯ್ಯನವರು ಹೇಳುವಂತೆ (ಏಕಲವ್ಯ ನಾಟಕದಲ್ಲಿ) ಕಾಡಿನ ಜನರಿಗೂ ಊರಿನ ಜನರಿಗೂ ಬಹು ಅಂತರ ಆ ಅಂತರದಲ್ಲಿ ಬುಡಕಟ್ಟು ಜನಾಂಗದವರಂತೆ ಮಲೇನಾಡ ಗುಡ್ಡ,ಬೆಟ್ಟ, ಶಿಖರ, ಹಳ್ಳ, ದಿಣ್ಣೆ, ನದಿ, ಮರಗಳ ಮಧ್ಯ ವಾಸಿಸುತ್ತಿರುವ ಜನರಿಗೆ ತಮ್ಮ ಜೀವನದ ಹಕ್ಕುಗಳಾವವು. ತಮ್ಮ ಬದುಕಿನ ಸ್ವಾತಂತ್ರ್ಯ ಇದಾವುದು ತಿಳಿಯದ ಮುಗ್ದರು ಯಾವ ರೀತಿಯಾಗಿ ತಮ್ಮ ಬದುಕನ್ನ ಸವೆಸುತ್ತಿದ್ದರೆಂಬುದನ್ನು ಸಾಮಿಪ್ಯ (ಬಹು ಹತ್ತಿರದಿಂದ) ಕಂಡು, ಅವರ ಅಳಲನ್ನು ಕೇಳಿದ ಹೆಬ್ಬಾಲೆಯವರು ಅವರ ಬದುಕನ್ನ ಆಧಾರವಾಗಿರಿಸಿಕೊಂಡು ಒಂದು ಜಾತಿ, ಜನಾಂಗದ ಅಥವಾ ಪ್ರದೇಶದ ಜನರ ಮೇಲೆ ಅನುಕಂಪ ಪಡಲು ಹೊರಟವರಲ್ಲ ಒಂದು ಪ್ರಾದೇಶಿಕ ಹಿನ್ನಲೆಯನ್ನು ಇರಿಸಿಕೊಂಡು ಇಡೀ ಸಮಾಜ ವ್ಯವಸ್ಥೆಯ ಬಗ್ಗೆ ದನಿ ಎತ್ತಿದ್ದಾರೆ.

ಇಷ್ಟೆಲ್ಲಾ ಬರೆದು ಸಾಧನೆ ಮಾಡಿದರು ಅದೆಲ್ಲ "ಎಲೆ ಮರೆಯ ಕಾಯಿಯಂತೆ", ನೇರವಾಗಿ ಗುರುತಿಸಿಕೊಳ್ಳಲು ಇಷ್ಟಪಟ್ಟಿಲ್ಲ. ತಮ್ಮ ಬಗ್ಗೆ ಕೃತಿ ಬರೆಯಲು ಹೊರಟ ನನಗೂ ಈ ಮಾತನ್ನೆ ಹೇಳಿದರು ಯಾವತ್ತಿಗೂ ಆಡಿ ತೋರುವುದಕ್ಕಿಂತ ಮಾಡಿ ತೋರಿಸಬೇಕೆಂದು ಕಿವಿಮಾತು ಹೇಳಿದರು.

ಒಟ್ಟಾರೆಯಾಗಿ ಸಾಹಿತ್ಯವನ್ನು ಅಸ್ತ್ರವಾಗಿ ಬಳಸಿಕೊಂಡು ಶಾಂತವಾಗಿ ಸಮಾನತೆಗಾಗಿ ಹೊರಾಡುತ್ತಿರುವ ಈ ಕವಿ ನಿಜಕ್ಕೂ ನಮ್ಮೆಲ್ಲರಿಗೂ ಸ್ಫೂರ್ತಿದಾಯಕರಾಗಿದ್ದಾರೆ.

# ಆಕರ ಗ್ರಂಥಗಳು:


| ಕ್ರಸಂ. | ಲೇಖಕರ ಹೆಸರು | ಗ್ರಂಥದ ಹೆಸರು | ಪ್ರಕಾಶನ/ ಪ್ರಕಟಿತ ವರ್ಷ |
|---|---|---|---|
| 01 | ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಡೆಮಿ ಬೆಂಗಳೂರು | ಸುವರ್ಣ ಜಾನಪದ | 1998 |
| 02 | ಡಾ. ಹೆಬ್ಬಾಲೆ. ಕೆ. ನಾಗೇಶ | ಕಾಳಿಂಗರಾಯನ ಕಾವ್ಯ | 1998 |
| 03 | ಡಾ. ಹೆಬ್ಬಾಲೆ. ಕೆ. ನಾಗೇಶ | ಕೊಡುವರ ಮದುವೆ | 2002 |
| 04 | ಡಾ. ಹೆಬ್ಬಾಲೆ. ಕೆ. ನಾಗೇಶ | ಕನ್ನಡ ಜಾನಪದ | 2006 |
| 05 | ಡಾ. ಹೆಬ್ಬಾಲೆ. ಕೆ. ನಾಗೇಶ | ಬಿಂಬದೊಳಗಿನ ಪ್ರಾಣ | 2006 |
| 06 | ಡಾ. ಹೆಬ್ಬಾಲೆ. ಕೆ. ನಾಗೇಶ | ಅರಳವ್ವ ಕಾದಂಬರಿ | 2006 |
| 07 | ಡಾ. ಹೆಬ್ಬಾಲೆ. ಕೆ. ನಾಗೇಶ | ಕಾವೇರಿ ಜಾನಪದ | 2005 |
| 08 | ಡಾ. ಹೆಬ್ಬಾಲೆ. ಕೆ. ನಾಗೇಶ | Glimpsess of Karnataka Folklore | 2004 |
| 09 | ಎಸ್.ಎಸ್. ಹನ್ನಂಗಡಿ | ತೇರು ಕಾದಂಬರಿ | 2004 |
| 10 | ಮಾಸಪತ್ರಿಕೆ | ಭವನಸಂಗಾತಿ ಮತ್ತು ಭಾವೈಕ್ಯ | 2006 |

# ಸ್ವ-ವಿವರ

| | | | | |
|---|---|---|---|---|
| ೧. | ಹೆಸರು | : | ಡಾ. ಹೆಬ್ಬಾಲೆ.ಕೆ.ನಾಗೇಶ | |
| ೨. | ಹುಟ್ಟಿದ ದಿನಾಂಕ: | | ೧೫-೦೫-೧೯೬೦ | |
| ೩. | ಹುದ್ದೆ | : | ಮುಖ್ಯಸ್ಥರು ಮತ್ತು ಪ್ರವಾಚಕರು ಜಾನಪದ ಅಧ್ಯಯನ ವಿಭಾಗ | |
| ೪. | ಸಂಪರ್ಕ ವಿಳಾಸ : | | ಕನ್ನಡ ವಿಶ್ವವಿದ್ಯಾಲಯ ಹಂಪಿ, ವಿದ್ಯಾರಣ್ಯ -೫೮೩ ೨೭೬<br>ಹೊಸಪೇಟೆ ತಾಲ್ಲೂಕು, ಬಳ್ಳಾರಿ ಜಿಲ್ಲೆ<br>ದೂರವಾಣಿ ಸಂ: ೦೮೩೯೪-೨೪೧೩೩೭ | |
| ೫. | ಮೂಲ ವೇತನ : | | ರೂ. ೧೧೬೨೫-೨೨೦೦೬/- | |
| ೬. | ಖಾಯಂ ವಿಳಾಸ: | | ಶನಿವಾರಸಂತೆ, ಸೋಮವಾರಪೇಟೆ ತಾಲ್ಲೂಕು ಕೊಡಗು ಜಿಲ್ಲೆ | |
| ೭. | ವಿದ್ಯಾರ್ಹತೆ | : | ೧. | ಎಂ.ಎ ( ೧೯೯೨-೯೪<br>ಜಾನಪದ ,<br>ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು |
| | | | ೨. | ಎಂ.ಎ. ( ೧೯೯೪-೯೬)<br>ಕನ್ನಡ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು |
| | | | ೩. | ಎಂ.ಎ.(೧೯೮೪-೮೬)<br>ಅರ್ಥಶಾಸ್ತ್ರ, ಮಂಗಳೂರು ವಿಶ್ವವಿದ್ಯಾಲಯ ಮಂಗಳೂರು |
| | | | ೪. | ಪಿ.ಹೆಚ್‌ಡಿ( ೧೯೯೯-)<br>ಕೊಡವರ ಪ್ರದರ್ಶನ ಕಲೆಗಳು ಒಂದು ಅಧ್ಯಯನ<br>ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು |
| | | | ೫. | ಸ್ನಾತಕೋತ್ತರ ಡಿಪ್ಲೋಮಾ( ೧೯೯೩)<br>ಭಾರತೀಯ ಸಾಹಿತ್ಯ, ಜೈನಾಲೋಜಿ, ಭಾಷಾವಿಜ್ಞಾನ<br>ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು |
| | | | ೬. | ಎಲ್.ಎಲ್.ಬಿ.( ೧೯೮೬-೯೦)<br>ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು |

# ಭಾವಚಿತ್ರಗಳು



ಡಾ.ಹಂಪನಾ ಅವರೊಂದಿಗೆ ಡಾ.ಹೆಬ್ಬಾಲೆ.ಕೆ.ನಾಗೇಶ ಅವರು




*ಸುತ್ತೂರ ಶ್ರೀಗಳೊಂದಿಗೆ ಡಾ. ಹೆಬ್ಬಾಲೆ. ಕೆ.ನಾಗೇಶ ಅವರು*




ದೇಶಿ ಸಮ್ಮೇಳನದಲ್ಲಿ ಇತರೆ ಸಾಹಿತಿಗಳೊಂದಿಗೆ ಡಾ. ಹೆಬ್ಬಾಲೆ.ಕೆ. ನಾಗೇಶ ಅವರು




ಸಂವಾದ ಗೋಷ್ಠಿಯಲ್ಲಿ ಕುವೆಂಪು ವಿಶ್ವವಿದ್ಯಾಲಯದ ಕುಲಪತಿ ಬಿ.ಎ.ವಿವೇಕ ರೈ ಅವರೊಂದಿಗೆ
ಡಾ. ಹೆಬ್ಬಾಲೆ.ಕೆ. ನಾಗೇಶ ಅವರು




ಕುವೆಂಪು ವಿಶ್ವವಿದ್ಯಾಲಯದ ಕುಲಪತಿ ಬಿ.ಎ.ವಿವೇಕ ರೈ ರೊಂದಿಗೆ

ಡಾ. ಹೆಬ್ಬಾಲೆ.ಕೆ. ನಾಗೇಶ ಅವರು

